ಹಿರೇಮಠ ಎಸ್.ಎಸ್.
ಕನ್ನಡ ಅಧ್ಯಾಪಕ

# ಹೊಸಗನ್ನಡ
# ಯಶೋಧರ ಚರಿತೆ



ಜಿ. ಪಿ. ರಾಜರತ್ನಂ






ಬಿ. ಬಿ. ಡಿ. ಪವರ್ ಪ್ರೆಸ್
ಅರಳೇಪೇಟೆ, ಬೆಂಗಳೂರು
ಇವರಲ್ಲಿ ಅಚ್ಚಾಯಿತು

# ಹೊಸಗನ್ನಡ ಯಶೋಧರ ಚರಿತೆ

**'ಯಶೋಧರ ಚರಿತೆ'** ಎಂಬುದು **ಜನ್ನ**ನೆಂಬ ಕನ್ನಡಕವಿ ಬರೆದ, ಆಕಾರದಲ್ಲಿ ಸಣ್ಣದಾದ, ಒಂದು ರಸಸ್ಯಂದಿ ಕಾವ್ಯ. ಇದರ ಅಚ್ಚಾದ ಪ್ರತಿಗಳು ಈಗ ದೊರಕುವುದಿಲ್ಲ.

ಮೊದಲೇ ಸಂಗ್ರಹವಾಗಿರುವ ಈ ಕಾವ್ಯವನ್ನು ಶ್ರೀ ಕ. ವೆಂ. ರಾಘವಾಚಾರ್ಯರು ಇನ್ನಷ್ಟು ರಸ ಒತ್ತಾಗುವಂತೆ ಸಂಗ್ರಹಿಸಿ, ಅದರ ರುಚಿ ಗೌರವ ತಿಳಿಯುವುದಕ್ಕೆ ಬೇಕಾದ ಮುನ್ನುಡಿಗಳೊಡನೆ, ಪರಿಶಿಷ್ಟಗಳೊಡನೆ, **'ಯಶೋಧರ ಚರಿತೆ'** ಎಂದೇ ಹೆಸರಿಟ್ಟು ಪ್ರಕಟಿಸಿದ್ದಾರೆ. ಇಲ್ಲಿ ಕಾವ್ಯದ ಜೊತೆಗೆ ಜನ್ನನ ವಿಷಯ, ಆತನ ಇತರ ಕೃತಿಗಳು, ಅವುಗಳಿಗೆ ಇರುವ ಸಾಮ್ಯ ಸಂಬಂಧ, ಈ ಕಾವ್ಯದ ವಿಶೇಷ ಗುಣಗಳು ಮುಂತಾದುವನ್ನು ಸಾಧಾರವಾಗಿ ಚರ್ಚಿಸಿ ತಿಳಿಸಿದ್ದಾರೆ.

ಪ್ರಕೃತದ ಈ **'ಹೊಸಗನ್ನಡ ಯಶೋಧರ ಚರಿತೆ'** ಶ್ರೀ ರಾಘವಾಚಾರ್ಯರ ಸಂಗ್ರಹದಲ್ಲಿರುವ ಇನ್ನೂರು ನಲವತ್ತೆಂಟು ಪದ್ಯಗಳಿಗೆ ಬರಿಯ ಗದ್ಯಾನುವಾದ. ಈ ಮೊದಲೇ ಪ್ರಕಟವಾಗಿರುವ ನನ್ನ **'ಪಂಪಭಾರತಸಾರ—ಪೂರ್ವಭಾಗ'** ಮತ್ತು **'ರನ್ನನ ರಸಘಟ್ಟ'** ಇವುಗಳನ್ನು ಯಾವ ಉದ್ದೇಶದಿಂದ ಸಿದ್ಧಪಡಿಸಿದೆನೋ ಅದೇ ಉದ್ದೇಶದಿಂದಲೇ ಇದನ್ನೂ ಮಾಡಿದ್ದೇನೆ. ಈ ಸಂದರ್ಭದಲ್ಲಿ, ತಮ್ಮ ಸಂಗ್ರಹದ ಫಲವನ್ನು ನಾನು ಬಳಸಿಕೊಳ್ಳಲು ಅನುಮತಿಕೊಟ್ಟ ಗೆಳೆಯರಾದ ರಾಘವಾಚಾರ್ಯರಿಗೆ ನನ್ನ ಕೃತಜ್ಞತೆಯನ್ನು ಒಪ್ಪಿಸುತ್ತೇನೆ.



ಹಳಗನ್ನಡದ ಪರಿಚಯವಿಲ್ಲದಿದ್ದರೂ ಹಳಗನ್ನಡದ ಉತ್ತಮ ಕೃತಿಗಳನ್ನು ಓದಬೇಕೆಂದು ಹಂಬಲಿಸುವವರಿಗಾಗಿ ಈ ಅನುವಾದ ಸಿದ್ಧವಾಗಿದೆ. ಈ ಅನುವಾದವಷ್ಟನ್ನೇ ಓದಿಕೊಂಡರೆ, ಮೂಲಕಾವ್ಯದಲ್ಲಿರುವ ರಸವಷ್ಟೂ ದೊರಕಿದಂತಾಗುವುದಿಲ್ಲ. ಈ ಅನುವಾದ ಮೂಲದ ವ್ಯಾಕರಣವನ್ನು ಸುಲಭಮಾಡಿಕೊಡುತ್ತದೆ. ಅಲ್ಲಲ್ಲೇ ಹೆಜ್ಜೆಹೆಜ್ಜೆಗೂ ಕೊಟ್ಟಿರುವ ಟಿಪ್ಪಣಿ, ಮೂಲದ ಭಾಷೆಯನ್ನು ಸುಲಭಮಾಡಿಕೊಡುತ್ತದೆ. ಇಂತಹ ಈ ಅನುವಾದದ ಸಹಾಯದಿಂದ ಮೂಲದ

ಪದ್ಯವನ್ನು ಓದಿದರೆ, ಮೂಲ ಹಳಗನ್ನಡವೇ ಆಗಿದ್ದರೂ, ಅದರಲ್ಲಿ ಮುಕ್ಕಾಲಿಗಿಂತ ಮಿಕ್ಕು ಅರ್ಥವಾಗುತ್ತದೆ. ಅನಂತರ, ಓದಿದುದನ್ನು ತಾವು ಮನನಮಾಡಿ, ಆ ಬಳಿಕ ಮೂಲ ಸಂಗ್ರಹಕಾರರ ಮುನ್ನುಡಿಯನ್ನು ಓದಿದರೆ, ಕಾವ್ಯ ಚೆನ್ನಾಗಿ ಕರವಶವಾಗುತ್ತದೆ. ಹೀಗೆ ಈ ಅನುವಾದ ಆ ಮೂಲಕ್ಕೆ ಪ್ರವೇಶ ಮಾತ್ರ. ಈ ಅನುವಾದವನ್ನು ಓದುವವರಿಗೆ ಆ ಮೂಲವನ್ನು ಓದಿದಾಗಲೇ ರಸಸಿದ್ಧಿ.

ಈ ಹೊಸಗನ್ನಡ ಗದ್ಯಾನುವಾದದಲ್ಲಿ, ಕಾವ್ಯ ಸಣ್ಣದಾದ ಕಾರಣದಿಂದ, ವ್ಯಾಕರಣ ಇನ್ನಷ್ಟು ಚೆನ್ನಾಗಿ ತಿಳಿಯಲೆಂಬ ಉದ್ದೇಶದಿಂದ, ಮೂಲದ ಪದಗಳನ್ನು ಹಾಗೆ ಹಾಗೇ ಇರಿಸಿಕೊಂಡಿದ್ದೇನೆ. ಅಲ್ಲೇ ಕೆಳಗೆ ಅರ್ಥ ಕೊಟ್ಟಿರುವುದರಿಂದ ಓದುವ ಶ್ರಮ ಅಧಿಕವಾಗಲಾರದು. ಅರ್ಥ ಸ್ಪಷ್ಟವಾಗುವುದಕ್ಕಾಗಿ ಅಲ್ಲಲ್ಲೇ ಬೇಕಾಗುವ ಅಗತ್ಯವಾದ ಅಧ್ಯಾಹಾರಗಳನ್ನು (          ) ಈ ರೀತಿಯ ಆವರಣಗಳ ಮಧ್ಯೆ ಕಾಣಿಸಿದ್ದೇನೆ.

ಈ ಕಿರಿದಾದ ಕೃತಿಯಲ್ಲಿ ಅಡಕವಾಗಿರುವ ಹಿರಿತನವನ್ನು ಬಿಡಿಸಿ ತೋರಿಸುವ ಪ್ರಯತ್ನ ಇಲ್ಲಿಯ ಮುನ್ನುಡಿ ಹಿನ್ನುಡಿಗಳಲ್ಲಿದೆ.

ಹಳಗನ್ನಡದ ಹೊಸಿಲನ್ನು ದಾಟಬೇಕೆನ್ನುವವರ ಕೈಯಲ್ಲಿ ಈ ಪುಸ್ತಕ ಬೆಳೆಯಲಿ.

೧—೯—೧೯೪೯,
ಬೆಂಗಳೂರು.

ಜಿ. ಪಿ. ರಾಜರತ್ನಂ.

## ಒಳಪಿಡಿ

# ಯಶೋಧರಚರಿತೆಯ ಕಟ್ಟಡ

'ಯಶೋಧರ ಚರಿತೆ' ಎಂಬ ಈ ಕಾವ್ಯ 'ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾರಭಸಮತಿಗೆ ಸಯ್ಪಂ ಪೇಳ್ದು, ಧರ್ಮಕ್ಕೆ ತಂದ ಶುಭಕಥನ.'

ಈ ಕಥನದಲ್ಲಿ ಎರಡು ಭಾಗ: ಒಂದು **ಕಥೆ;** ಇನ್ನೊಂದು, ಆ ಕಥೆಗೆ ಗುರಿಯಾದ **ಬೋಧೆ.**

ಈ ಕಾವ್ಯದ ಕಥೆಯಲ್ಲಿ ಮತ್ತೆ ಎರಡು ಭಾಗ: ಒಂದು, ಚಿತ್ರದ ಹಾಗಿರುವ **ಒಳಗಿನ ಕಥೆ;** ಮತ್ತೊಂದು, ಚೌಕಟ್ಟಿನ ಹಾಗಿರುವ **ಹೊರಗಿನ ಕಥೆ.** ಈ ಎರಡು ಕಥೆಗಳೂ ಒಂದನ್ನು ಒಂದು ಬಿಟ್ಟಿರಲಾರದೆ ಅನ್ಯೋನ್ಯ ಅವಲಂಬಿಗಳಾಗಿವೆ. ಯಶೋಧರನು ಉದ್ಧಾರವಾದ ಒಳಗಿನ ಕಥೆಗೂ ಮಾರಿದತ್ತನು ಉದ್ಧಾರವಾದ ಹೊರಗಿನ ಕಥೆಗೂ ಆನುಪೂರ್ವಿಯಲ್ಲಿ, ಬೆಳವಣಿಗೆಯ ಪರಿಣಾಮದಲ್ಲಿ, ಹಾಗೂ ಪಾತ್ರಗಳ ಪರಂಪರೆಯಲ್ಲಿ ಅತಿನಿಕಟವಾದ ಸಂಬಂಧ ಉಂಟು.

ಪುನಃ, ಈ ಕಾವ್ಯದ ತಿರುಳಾದ ಒಳಕಥೆಯಲ್ಲಿ, ಯಶೋಧರನ ಕಥೆಯಲ್ಲಿ, ಎರಡು ಪರಸ್ಪರ ಸಂಬದ್ಧವಾದ ಭಾಗ ಉಂಟು: ಮುಖ್ಯವಾದದ್ದು, ಆದರಿಂದಲೇ ಕಾವ್ಯಕ್ಕೆ ನಾಮಕರಣವಾಗಿರುವುದು, ಯಶೋಧರನು ಹಿಟ್ಟಿನ ಕೋಳಿಯನ್ನು ಕೊಂದು, ಆ ಭಾವಾಸ್ರವದ ಫಲವಾಗಿ ಹಲವು ಸಲ ತಿರ್ಯಗ್ಗತಿಯನ್ನು ಪಡೆದು, ಕಡೆಗೆ ಧರ್ಮಶ್ರವಣದಿಂದ ಉತ್ತಮಗತಿಯನ್ನು ಪಡೆದದ್ದು; ಇದರ ಭುಜಕ್ಕೆ ಭುಜ ಹೊಂದಿಸಿಕೊಂಡು, ಮಗನ ಮೇಲಿನ ಮೋಹದಿಂದಲೂ ತನ್ನ ಮಿಥ್ಯಾದೃಷ್ಟಿಯಿಂದಲೂ ಮಗನಿಂದ ತಪ್ಪುಮಾಡಿಸಿ, ಅವನ ಭವಾವಳಿಗೆ ಉದ್ದಕ್ಕೂ ಕಾರಣಳಾಗಿ, ಕಡೆಗೆ ಧರ್ಮಶ್ರವಣದಿಂದ ಮಗನೊಡನೆಯೇ ಉತ್ತಮಗತಿಗೆ ಏರಿದ ಯಶೋಧರನ ತಾಯಿ ಚಂದ್ರಮತಿಯ ಕಥೆ. ಈ ಮುಖ್ಯವಾದ ಕಥೆ ಹುಟ್ಟಿ ಬೆಳೆಯುವುದಕ್ಕೆ ಕಾರಣವಾಗಿ ಬರತಕ್ಕದ್ದು, ಯಶೋಧರನ ಹೆಂಡತಿಯಾದ ಅಮೃತಮತಿಯ ಕಥೆ, ಅವಳು ಅಷ್ಟವಂಕನೊಡನೆ ಬೆಳೆಸಿಕೊಂಡ ವಿಕೃತಪ್ರಣಯದ ಕಥೆ. ಇದು ಎರಡನೆಯ ಕಥೆ.

ಕಥೆಯ ಬೇರೆಬೇರೆ ಅಂಗಗಳಿಗೂ ಕಥೆಯ ಗುರಿಯಾದ ಜೈನ ಧರ್ಮದ ಬೋಧೆಗೂ ಸಂಪೂರ್ಣವಾದ ಸಮನ್ವಯವನ್ನು ಸಾಧಿಸಿರುವುದೇ ಈ ಕಿರಿಯ ಕೃತಿಯ ಹಿರಿಮೆ. ಕಥೆಯ ಬೆಳವಣಿಗೆ ಹೀಗೆ ಇದೆ:

೧. ರಾಜಪುರದ ಮಾರಿಯ ಮಹಿಮೆ—ಆ ದೇವಿಯ ಪೂಜೆಗೆಂದು ಮಾರಿದತ್ತನು ಅಭಯರುಚಿ ಮತಿಯರನ್ನು ಹಿಡಿಸಿ ತರಿಸಿದ್ದು—ಆ ಮಕ್ಕಳನ್ನು ಕಂಡು, ಅವನ ಮನಸ್ಸಿನಲ್ಲಿ ಮರುಕ ಮೂಡಿ, ಅವನು ಅವರ ಕಥೆಯನ್ನು ಕೇಳಲು ಬಯಸಿದ್ದು (ಒಂದನೆಯ ಅವತಾರ.)

೨. ಯಶೌಘನ ಮಗನಾದ ಯಶೋಧರನು ಅಮೃತಮತಿಯೊಡನೆ ಸುಖವಾಗಿದ್ದುದು (೨—೧೧ರ ವರೆಗೆ)—ಅಮೃತಮತಿ ಅಷ್ಟವಂಕನ ಗಾನಕ್ಕೆ ಸೋತು (೧೪ರ ವರೆಗೆ), ದೂತಿಯನ್ನು ಕಳಿಸಿ, ಅವನನ್ನು ಕೂಡಿದ್ದು (೧೪ರಿಂದ ೨೬.)

೩. ಅಮೃತಮತಿಯಲ್ಲಿ ಯಶೋಧರನಿಗೆ ಸಂಶಯ ಬಂದು, ಅವನು ಒಂದು ರಾತ್ರಿ ಅವಳನ್ನು ಅನುಸರಿಸಿ ಹೋಗಿ, ಅವಳು ಅಷ್ಟವಂಕನೊಡನೆ ಇದ್ದುದನ್ನು ಕಂಡು, ಮನಸ್ಸು ಮುರಿದು ಬಂದದ್ದು (೨—೨೭ ರಿಂದ ೪೦.) ಅವಳ ಅಣಕಕ್ಕೆ ಬಗೆ ಕದಡಿ, ಯಶೋಧರನು ತಾಯಿಯ ಬಳಿಗೆ ಹೋದದ್ದು (೨—೪೨ ರಿಂದ ೫೨.)

೪. ತಾಯಿಯ ಕಳವಳ (೩—೧ರಿಂದ ೬.) ಅರಸನು ನೆವದಿಂದ ಆಡಿದ ವಂಚನೆಯ ಮಾತು (೩—೭ ರಿಂದ ೧೦.) ಕುರಿಯನ್ನು ಬಲಿ ಕೊಡಲು ತಾಯಿಗೂ ಮಗನಿಗೂ ನಡೆದ ಚರ್ಚೆ (೧೧ ರಿಂದ ೧೭.) ಕಡೆಗೆ ಯಶೋಧರನು ಹಿಟ್ಟಿನ ಕೋಳಿಯನ್ನು ಬಲಿಕೊಡಲು ಒಪ್ಪಿದ್ದು, ಅದರಿಂದ ಅವನಿಗೆ ಉಂಟಾದ ಉದ್ವೇಗ (೧೮ ರಿಂದ ೨೭.)

೫. ಸಂಸಾರವನ್ನು ತೊರೆಯಲು ಹೊರಟ ಯಶೋಧರನಿಗೂ ಅವನ ತಾಯಿಗೂ ಅಮೃತಮತಿ ವಿಷವಿಕ್ಕಿ ಕೊಂದದ್ದು (೩—೨೮ ರಿಂದ ೩೧.)

೬. ಯಶೋಧರ ಚಂದ್ರಮತಿಯರ ಜನ್ಮಾಂತರಗಳ ಕಥೆ. (೩—೩೨ರಿಂದ ೪—೩೨ ಪೂರ್ತಿ.) ಇದರ ವಿವರವನ್ನು ಮುಂದಿನ '**ಭವಾವಳಿ**' ಎಂಬಲ್ಲಿ ನೋಡಿ. (ಇದೇ ಪುಸ್ತಕದ ಪುಟ ೬೬ರಿಂದ.)

೭. ರಾಜಪುರದ ತಳಾರನಾದ ಚಂಡಕರ್ಮನು ಅಕಂಪನರನ್ನು ಕಂಡು, ಆತ್ಮವೆಂಬ ವಸ್ತು ಇಲ್ಲವೆಂದು ಅವರೊಡನೆ ವಾದಮಾಡಿದ್ದು (೪—೪ ರಿಂದ ೧೩.) ಅಕಂಪನರು ಆತ್ಮದ ಲಕ್ಷಣಗಳನ್ನೂ ಧರ್ಮದ ಸ್ವರೂಪವನ್ನೂ ಅವನಿಗೆ ಹೇಳಿದ್ದು (೪—೧೪ರಿಂದ ೨೬.) ಚಂಡಕರ್ಮನು ಜಿನದೀಕ್ಷೆ ಧರಿಸಿದ್ದು (೪—೨೭.) ಕುಸುಮಾವಳಿಯೊಡನೆ ವನಕ್ರೀಡೆಗೆ ಬಂದ (೪—೧ರಿಂದ ೩) ಯಶೋಮತಿಯ ಬಾಣದಿಂದ ಕೋಳಿಗಳು ಸತ್ತು ನರಜನ್ಮ ಪಡೆದದ್ದು (೪—೨೮ ರಿಂದ ೩೨.)

೮. ಯಶೋಮತಿ ಬೇಟೆಗೆ ಹೋಗಿ, ಸುದತ್ತಾಚಾರ್ಯರನ್ನು ಕಂಡು ಮುನಿದಾಗ, ಕಲ್ಯಾಣಮಿತ್ರನು ಅವನಿಗೆ ಅವರ ಮಹಿಮೆಯನ್ನು ತಿಳಿಸಿದ್ದು; ಅವನು ಸುದತ್ತರನ್ನು ಪೂಜಿಸಿದ್ದು (೪—೩೩ ರಿಂದ ೪೫.)

೯. ಯಶೌಘ, ಅಮೃತಮತಿ, ಯಶೋಧರ, ಚಂದ್ರಮತಿ, ಇವರ ಗತಿಗಳು. (೪—೪೬ ರಿಂದ ೫೦.)

೧೦. ಧರ್ಮದ ಮಹಿಮೆಗೆ ವಶನಾಗಿ ಯಶೋಮತಿ ಜೈನದೀಕ್ಷೆಯನ್ನು ಕೈಕೊಂಡದ್ದು (೪—೫೧ ರಿಂದ ೫೬.) ಅಭಯರುಚಿ ಅಭಯಮತಿಗಳೂ ದೀಕ್ಷೆಪಡೆದದ್ದು (೫೭—೫೮.)

೧೧. ಅಭಯರುಚಿಯ ಕರುಣೆಯ ಮಾತಿನಿಂದ ಮಾರಿದತ್ತನ ಹೃದಯ ಪರಿವರ್ತನೆಯಾದದ್ದು (೪—೫೯ ರಿಂದ ೬೨.) ಚಂಡಮಾರಿ ಪ್ರತ್ಯಕ್ಷವಾಗಿ ಜೀವಹಿಂಸೆಯನ್ನು ನಿಷೇಧಿಸಿದ್ದು(೬೩ ರಿಂದ ೬೪.)ಮಾರಿದತ್ತನು ಜಿನದೀಕ್ಷೆಯನ್ನು ಕೈಕೊಂಡು, ಸತ್ತು ದೇವತೆಯಾದದ್ದು (೬೫ರಿಂದ ೬೮.)

೧೨. ಅಭಯರುಚಿ ಅಭಯಮತಿಗಳು ಸುಗತಿ ಪಡೆದದ್ದು (೬೯.)

೧೩. ಮಾರಿದತ್ತನಿಗೂ ಉತ್ತಮಗತಿಯಾದುದಕ್ಕೆ ಆಶ್ಚರ್ಯಗೊಂಡು, ಯಶೋಧರನ ಮೊಮ್ಮಗನಾದ ಯಶೋಧರನು ಧರ್ಮದ ಮಹಿಮೆಯನ್ನು ಮನಗಂಡದ್ದು (೭೦ ರಿಂದ ೭೨.)

೧೪. ಭರತವಾಕ್ಯ (೭೩—೭೪.)

## ಯಶೋಧರ ಚರಿತೆಯ ಪಾತ್ರಗಳು

**ಮಾರಿದತ್ತ:** ರಾಜಪುರದ ಅರಸು. ಚಂಡಮಾರಿದೇವತೆಯ ಭಕ್ತ. ಅಭಯರುಚಿ ಅನುರಾಗದಿಂದ ಹೇಳಿದ ಕಥೆಯನ್ನು ಕೇಳಿ ತನ್ನ 'ಹಿಂಸಾರಭಸಮತಿ' ಯನ್ನು ಬಿಟ್ಟು, ಉದ್ವೇಗಪರನಾಗಿ, ಜಿನದೀಕ್ಷೆಯನ್ನು ಕೈಕೊಂಡು, ಸತ್ತು ಮೂರನೆಯ ಸ್ವರ್ಗಕ್ಕೆ ಏರಿದವನು. ಅಭಯರುಚಿ ಅಭಯಮತಿಗಳ ತಾಯಿಯಾದ ಕುಸುಮಾವಳಿ ಇವನ ತಂಗಿ.

**ಚಂಡಮಾರಿ:** ರಾಜಪುರದ ನಗರದೇವತೆ. ಪಾಪಕಳಾಪಂಡಿತೆ. ಅಭಯರುಚಿಯ ಕಥೆಯನ್ನು ಕೇಳಿ ಇವಳ ಮನಸ್ಸೂ ಅಹಿಂಸೆಗೆ ಒಲಿಯಿತು. 'ಆಪೊತ್ತುಂ ಅನೇಕ ಜೀವಹತಿ ತನಗೆ ಸುಖೋದ್ದೀಪನಂ' ಎನ್ನಿಸುತ್ತಿದ್ದವಳು, 'ಪೂಜೆಯೊಳೆಂದಿನ ಪರಿ ತಪ್ಪೆ ತಪ್ಪದೆ ಮಾಣದವಳು', ಕಡೆಗೆ 'ಜೀವಜಾತದಿಂದೆನಗೆ ಬಲಿಯನಿತ್ತೊಡೆ ಮುನಿವೆಂ' ಎಂದು ಪ್ರಾಣಿವಧೆಯನ್ನು ನಿಷೇಧಿಸಿ, ತಿರೋಹಿತೆಯಾದವಳು. ಅಭಯರುಚಿಯನ್ನು ತನಗೆ ಆಚಾರ್ಯನೆಂದು ಒಪ್ಪಿಕೊಂಡವಳು.

**ಚಂಡಕರ್ಮ:** ರಾಜಪುರದ ತಳಾರ. 'ಪಾಪಕರ್ಮ.' ಅಭಯರುಚಿ ಮತಿಗಳನ್ನು ಮಾರಿಗೆ ಬಲಿಕೊಡುವುದಕ್ಕಾಗಿ ಹಿಡಿದು ತಂದವನು. (ಮುಂದೆ ಇನ್ನೊಬ್ಬ ಚಂಡಕರ್ಮನೆಂಬ ತಳಾರ ಬರುತ್ತಾನೆ, ನೋಡಿ.)

**ಸುದತ್ತಾಚಾರ್ಯರು:** ಅಭಯರುಚಿ ಮತಿಗಳ ಗುರುಗಳು. ಅವರ ವರ್ಣನೆ(೧—೧೮; ೪—೪೩.)ಯಶೋಧರನ ಮಗನಾದ ಯಶೋಮತಿಗೆ ಧರ್ಮದಲ್ಲಿ ವಿಶ್ವಾಸಹುಟ್ಟಿದ್ದು ಇವರ ಬೋಧೆಯಿಂದಲೇ. ಆ ಸಂದರ್ಭದಲ್ಲಿಯೇ ಅಭಯರುಚಿ ಮತಿಗಳು ಅವರ ಶಿಷ್ಯರಾದದ್ದು.

**ಅಭಯರುಚಿ:** ಸುದತ್ತರ ಶಿಷ್ಯ, ಹುಡುಗ. ಹಿಂದಿನ ಜನ್ಮದಲ್ಲಿ ಇವನೇ ಯಶೋಧರನಾಗಿದ್ದವನು. ಇವನಿಂದಲೇ ಮಾರಿದತ್ತ ಉದ್ಧಾರವಾದದ್ದು. ಈ ಅಭಯರುಚಿಯ ರೂಪುಗುಣಗಳ ವರ್ಣನೆ ಮೊದಲನೆಯ ಅವತಾರದ ಉತ್ತರಾರ್ಧದಲ್ಲೂ ನಾಲ್ಕನೆಯ ಅವತಾರದ ಕಡೆಯಲ್ಲೂ ಚೆನ್ನಾಗಿ ಚಿತ್ರಿತವಾಗಿದೆ.

**ಅಭಯಮತಿ :** ಅಭಯರುಚಿಯ ಅವಳಿತಂಗಿ, ಹುಡುಗಿ. ಅಭಯರುಚಿ ಹಿಂದೆ ಯಶೋಧರನಾಗಿದ್ದಾಗ, ಇವಳು ಅವನ ತಾಯಿ

ಯಾದ ಚಂದ್ರಮತಿಯಾಗಿದ್ದಳು. ಕಾವ್ಯದಲ್ಲಿ ಇವಳ ಪ್ರಭಾವ ಆ ಅಣ್ಣನದರಷ್ಟು ಇಲ್ಲದಿದ್ದರೂ ಇವಳು ಆಡುವ ನಾಲ್ಕು ಮಾತು (೧–೨೩, ೨೪, ೨೫.) ಚಿರಸ್ಮರಣೀಯವಾಗಿದೆ.

**ಯಶೌಘ:** ಉಜ್ಜೇನಿನಗರದ ಅರಸ. ಇವನ ಮಗನೇ ಯಶೋಧರ. ಮುಪ್ಪು ಬಂದೊಡನೆ ಮಗನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸಿಗೆ ಹೋದವನು. ಕಡೆಗೆ ಸ್ವರ್ಗವನ್ನು ಪಡೆದವನು.

**ಚಂದ್ರಮತಿ:** ಯಶೌಘನ ಹೆಂಡತಿ. ಯಶೋಧರನ ತಾಯಿ. ಇವಳೇ ಸದ್ಯದ ಜನ್ಮದಲ್ಲಿ ಅಭಯರುಚಿ. ಇವಳ ಮಗನ ಮೇಲಿನ ಮೋಹ, ಅದರ ಪರಿಣಾಮವಾಗಿ ಇವಳು ಅನುಭವಿಸಿದ ಭವಾವಳಿ, ಇದು ಯಶೋಧರನ ಕಥೆಯ ಒಂದು ಅರ್ಧಭಾಗ.

**ಯಶೋಧರ:** ಯಶೌಘನ ಮಗ, ಈ ಕಾವ್ಯದ ನಾಯಕ. ತಮಸ್ಸಿನಿಂದ ಕೆಟ್ಟವನು. ಇವನ ರೂಪವರ್ಣನೆ, ಗುಣವರ್ಣನೆ (೨—೪ ರಿಂದ ೭, ೧೦ ರಿಂದ ೧೧, ೨೮ ರಿಂದ ೫೧; ೩—೧ ರಿಂದ ೩೧) ಕಡೆಯವರೆಗೂ ಇವನ ಭವಾವಳಿ.

**ಅಮೃತಮತಿ:** ಯಶೋಧರನ ಹೆಂಡತಿ. ದೈವದ ಕೈಗೊಂಬೆಯಾಗಿ, ಸಂಯಮವಿಲ್ಲದ್ದರಿಂದ ಅಧೋಗತಿಗೆ ಇಳಿದವಳು. ಇವಳ ರೂಪು, ಗುಣ, ಗತಿ. (೨—೧೦ ರಿಂದ ೪೮; ೩—೨೮ ರಿಂದ ೩೧; ೩೮ ರಿಂದ ೩೯, ೬೭ ರಿಂದ ೭೧; ೪—೪೭.)

**ಅಷ್ಟವಂಕ:** ಯಶೋಧರನ ಪಟ್ಟದಾನೆಯ ಬದಗ. ಇವನ ಹಾಡಿನಿಂದಲೇ ಅಮೃತಮತಿಗೆ ಆ ವಿಷವರ್ತನೆ ಉಂಟಾದದ್ದು. ಇವನನ್ನು ಅಮೃತಮತಿ ಇರುವಲ್ಲಿಯೇ ನೋಡಬೇಕು.

**ಯಶೋಮತಿ:** ಯಶೋಧರನ ಮಗ. ತಂದೆ ಹೋದಮೇಲೆ ರಾಜ್ಯ ಇವನಿಗೆ ಬಂತು. ಮುಂದೆ ಯಶೋಧರನು ತಿರ್ಯಗ್ಗತಿ ಪಡೆದಾಗ ಏನೇನೋ ಕಾರಣಗಳಿಂದ ಇವನ ಮನೆಗೇ ಬಂದು ಸೇರಿ, ಇವನಿಗೇ ಮಗನಾದಾಗ, ಅಭಯರುಚಿಯೆಂದು ಹೆಸರುಪಡೆಯುವನು. ಇವನೂ ಮೊದಲು ತನ್ನ ಹೆಂಡತಿಯ ಅಣ್ಣನಾದ ಮಾರಿದತ್ತನ ಹಾಗೇ ಹಿಂಸಾಪರನಾಗಿದ್ದು, ಕಲ್ಯಾಣಮಿತ್ರನೆಂಬ ಸ್ನೇಹಿತನ ಕೃಪೆಯಿಂದ,

ಸುದತ್ತಾಚಾರ್ಯರ ಬೋಧೆಯಿಂದ, ಮಕ್ಕಳಾದ ಅಭಯರುಚಿ ಮತಿಗಳ ಪ್ರಬೋಧನೆಯಿಂದ ಉತ್ತಮಗತಿ ಪಡೆಯುತ್ತಾನೆ. (ಅವತಾರ ೩, ೪.)

**ಕುಸುಮಾವಳಿ:** ಯಶೋಮತಿಯ ಪತ್ನಿ. ಮಾರಿದತ್ತನ ತಂಗಿ. ಅಭಯರುಚಿ ಮತಿಗಳ ತಾಯಿ. ಯಶೋಮತಿಯ ಇನ್ನೊಬ್ಬ ಮಗನಾದ ಯಶೋಧರನಿಗೆ (೪—೫೭), ಅಭಯರುಚಿಗಿಂತ ಚಿಕ್ಕವನಿಗೆ, ಇವಳೇ ತಾಯಿಯಿರಬಹುದು.

**ಅಕಂಪನರು:** ಒಬ್ಬರು ಜೈನ ಗುರುಗಳು. ಇವರ ಧರ್ಮೋಪದೇಶದ ಭಾಗ (೪—೧೫ ರಿಂದ ೨೬) ಈ ಕಾವ್ಯದ ಹಾಲುಕಡಲಿನಲ್ಲಿ ಅಡಗಿರುವ ಬೆಣ್ಣೆಯ ಮುದ್ದೆ. ಇವರ ಬೋಧೆಯಿಂದಲೇ, ಕೋಳಿಗಳಾಗಿದ್ದ ಯಶೋಧರ ಚಂದ್ರಮತಿಯರು ಮನುಷ್ಯ ಜನ್ಮವನ್ನು ಪಡೆದು ಅಭಯರುಚಿ ಅಭಯಮತಿ ಆದದ್ದು.

**ಚಂಡಕರ್ಮ:** ಉಜ್ಜೇನಿಯ ತಳಾರ. ಕೋಳಿಗಳಾಗಿದ್ದ ಯಶೋಧರ ಚಂದ್ರಮತಿಯರನ್ನು ಪಾಲಿಸಿದವನು ಇವನೇ. ಇವನ ನೈರಾತ್ಮ್ಯವಾದದ ನೆಪದಿಂದಲೇ, ಕೋಳಿಗಳಾಗಿದ್ದವರ ತಿರ್ಯಗ್ಜನ್ಮ ಕಳೆಯುವುದಕ್ಕೆ ಕಾರಣವಾಗಿ ಅಕಂಪನರ ಬೋಧೆ ಉದ್ಭವಿಸಿದ್ದು. ಇವನ ನೈರಾತ್ಮ್ಯವಾದ (೪—೧೦ ರಿಂದ ೧೩.)

**ಕಲ್ಯಾಣಮಿತ್ರ:** ಯಶೋಮತಿಯ ಮಿತ್ರನಾದ ವರ್ತಕ. ಯಶೋಮತಿ ಸುದತ್ತಾಚಾರ್ಯರನ್ನು ಕೊಲ್ಲಲು ಹೋದಾಗ, ಅವನನ್ನು ತಡೆದು, ಅವನ ಮನಸ್ಸನ್ನು ತಿರುಗಿಸಿದವನು. ಇವನೂ ಯಶೋಮತಿಯ ಜೊತೆಯಲ್ಲಿ ಕಡೆಗೆ ಜಿನದೀಕ್ಷೆಯನ್ನು ಕೈಕೊಳ್ಳುತ್ತಾನೆ.

**ಯಶೋಧರ:** ಇವನು ಹಿಟ್ಟಿನ ಕೋಳಿಯನ್ನು ಕೊಂದ ಯಶೋಧರನ ಮೊಮ್ಮಗ. ಯಶೋಮತಿಯ ಮಗ. ಅಭಯರುಚಿಯ ತಮ್ಮ. ಅಭಯರುಚಿ ತಾನು ತಪಸ್ಸಿಗೆ ಹೋಗುವಾಗ ಇವನಿಗೆ ರಾಜ್ಯವನ್ನು ಒಪ್ಪಿಸಿ ಹೋದನು (೪—೫೭.) ಇವನು ಕಡೆಗೆ (೪—೭೦ರಿಂದ ೭೨) ತಮ್ಮವರಿಗಾದ ಸುಗತಿಯನ್ನು ಕೇಳಿ, ಸುದತ್ತರನ್ನು ಪೂಜಿಸಿದನು.

**ಕುಸುಮದತ್ತ:** ಮಾರಿದತ್ತನ ಮಗ. ತಂದೆ ತಾನು ಜಿನದೀಕ್ಷೆಯನ್ನು ಕೈಕೊಂಡಾಗ ಇವನಿಗೆ ರಾಜ್ಯವನ್ನು ಒಪ್ಪಿಸಿದನು. (೪—೬೭.)

# ಯಶೋಧರಚರಿತೆಯಲ್ಲಿ ಧರ್ಮ

ಈ ಕಾವ್ಯದಲ್ಲಿ ಸ್ವಾರಸ್ಯವಾದ ಕಥೆಇದ್ದರೂ, ಇಲ್ಲಿನಕಥೆ ಎಲ್ಲವೂ ಧರ್ಮದ ಪ್ರಭಾವನೆಗಾಗಿ ಎಂಬುದನ್ನು ಕವಿಯೇ ಪ್ರಾರಂಭದಲ್ಲಿ, ಕೊನೆಗೆ ಫಲಶ್ರುತಿ ಹೇಳಿದ ಹಾಗೆ, ಸ್ಪಷ್ಟವಾಗಿ ಸಾರಿದ್ದಾನೆ: 'ಪರೆವುದು ದುರಿತತಮಿಸ್ರಂ, ಪೊರೆಯೇಱುವುದು ಅಮಳದೃಷ್ಟಿಕುವಳಯವನಂ, ಆಚರಿಪ ಜನಕ್ಕೆ, ಯಶೋಧರ ಕಥಾಶ್ರವಣಂ ಎಂಬ ಚಂದ್ರೋದಯ ದೊಳ್'(೧—೪.)ಅಷ್ಟೇ ಅಲ್ಲ, 'ಜಯಶ್ರೀ ಕಾಂತೆಯುಮಂ ಪರಮಶ್ರೀ ಕಾಂತೆಯುಮಂ ಕುಡುಗುಂ ಈ ಸತ್‌ಕಥನಂ.' (೧—೪೩). ಮತ್ತು 'ಈ ಶುಭಕಥನಮಂ ಆತ್ಯಾನಂದದಿಂ ಕೇಳ್ವ ಭವ್ಯಪ್ರಭುಸಭೆಗೆ ಎಸೆದಿರ್ಕುಂ ಮಂಗಳಂ ಶ್ರೀವಿಲಾಸಂ' (೧—೪೫.)

ಈ ಪ್ರಸ್ತಾವದಲ್ಲಿ ಜೈನಧರ್ಮಕ್ಕೆ ವಿಶಿಷ್ಟವಾದ ಕೆಲವು ಬೋಧೆ ಬರುವುದರ ಜೊತೆಗೆ ಸರ್ವಧರ್ಮಕ್ಕೆ ಸೇರುವಂತಹ ಹಲವು ಭಾವನೆ ಗಳೂ ಅಲ್ಲಲ್ಲೇ ಉದಾಹರಣೆಗಳೊಡನೆ ರೂಪುಗೊಳ್ಳುತ್ತವೆ. ಇಂತಹ ಕೆಲವನ್ನು ತನಿಯಾಗಿ ಎತ್ತಿಕೊಂಡು ಭಾವಿಸಿಕೊಳ್ಳಬಹುದು.

'ನಿಯತಿಯನಾರ್ ಮೀಱಿದಪರ್' (೧—೨೨.): ಅಮೃತಮತಿ ಅಷ್ಟವಂಕನಲ್ಲಿ ಅನುರಕ್ತಳಾದದ್ದು, ಹಿಟ್ಟಿನ ಕೋಳಿಯಲ್ಲಿ ವ್ಯಂತರ ಬಂದು ನೆಲೆಸಿದ್ದು, ಕೋಳಿಗಳು ಧರ್ಮವನ್ನು ಕೇಳುತ್ತಿದ್ದಾಗ ಬಾಣ ಬಂದು ತಾಕಿದ್ದು, ಅವಳಿಗಳನ್ನು ಮಾರಿಯ ಮುಂದೆ ತಂದದ್ದು— ಇದಕ್ಕೆ ನಿಯತಿಯೇ ಕಾರಣ.

'ಪೆತ್ತ ಪರೀಷಹಜಯಮೆ ತಪಂ' (೧—೨೨): ಚಂಡಕರ್ಮ ನಿಂದಲೂ ಮಾರಿದತ್ತನಿಂದಲೂ ಆದ ಉಪದ್ರವವನ್ನು ಸಹಿಸಿಕೊಂಡ ತಪೋಮಹಿಮೆಯಿಂದಲೇ ಮಾರಿದತ್ತನ ಉದ್ಧಾರವಾದದ್ದು, ಅದೇ ಜನ್ಮದಲ್ಲೇ ಅವಳಿಗಳಿಗೆ ಈಶಾನಕಲ್ಪ ಪ್ರಾಪ್ತಿಯಾದದ್ದು.

'ಮಾಡಿದುದಂ ನಾವುಣ್ಣದೆ ಪೋಕುಮೆ' (೧—೨೩)ಈ ಮಾತಿಗೆ, ಯಶೌಘ, ಯಶೋಧರ, ಚಂದ್ರಮತಿ, ಅಮೃತಮತಿ, ಮಾರಿದತ್ತ ಇವರ ಕಥೆಗಳೇ ಸಾಕ್ಷಿ.

'ಎನಿತು ಒಳವು ಅಪಾಯಕೋಟಿಗಳ್ ಅನಿತರ್ಕಂ ಗೇಹಮಲ್ತೆ

ದೇಹಂ' (೧—೨೪.) ಯಶೋಧರ ಚಂದ್ರಮತಿಯರ ಭವಾವಳಿಯೇ ಈ ಮಾತಿಗೆ ಸಾಕ್ಷಿ.

'ಕಾಲಲಬ್ಧಿ ಪೊಲಗೆಡಿಸುವುದೇ' (೧—೪೨.) ಜೈನಧರ್ಮದಲ್ಲಿ ಇದಕ್ಕಿಂತ ಮೊದಲನೆಯ ಮಾತಿಲ್ಲ. ಸಮ್ಯಕ್ತ್ವ ಸೋಕಬೇಕಾದರೂ ಕಾಲ ಪಕ್ವವಾಗಿ ಬರಬೇಕು. ಇದಕ್ಕೆ ಉದಾಹರಣೆ: ಹಿಂಸಾರಭಸಮತಿಯಾದ ಮಾರಿದತ್ತನಿಗೆ ಧರ್ಮದಲ್ಲಿ ಅನುರಾಗವಾದದ್ದು, ಯಶೋಧರ ಚಂದ್ರಮತಿಯರಿಗೆ ಕೋಳಿಯ ಜನ್ಮದಲ್ಲಿ ಧರ್ಮಾನುರಾಗವುಂಟಾದ್ದು, ಚಂಡಕರ್ಮನಿಗೆ ಅಕಂಪನರ ಬಳಿಯೂ ಯಶೋಮತಿಗೆ ಸುದತ್ತರ ಬಳಿಯೂ ಸಮ್ಯಕ್ತ್ವ ದೊರಕಿದ್ದು, ಕಡೆಗೆ ಪಾಪಕಳಾಪಂಡಿತೆಯಾದ ಚಂಡಮಾರಿ ಕೂಡ ಪಾಪದಿಂದ ವಿಮುಖಳಾದದ್ದು.

'ಬೆಂದ ಬಿದಿಗೆ ಕಣ್ಣಿಲ್ಲಕ್ಕುಂ' (೨—೧೬): ಇದನ್ನೇ ಮೇಲೆ 'ನಿಯತಿಯನಾರ್ ಮೀಱಿದಪರ್' ಎಂದದ್ದು; ಇದನ್ನೇ ಮುಂದೆ 'ಆರ್ ಅಱಿವರಯ್ಯ ವಿಧಿವಿಳಸನಮಂ' ಎನ್ನುವುದು.

'ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್' (೨—೨೪): ಇದಕ್ಕೂ ಜೈನಧರ್ಮಕ್ಕೂ ಸಂಬಂಧವಿಲ್ಲ. ಇದು ಮೋಹದಿಂದ ಹುಟ್ಟುವ ಮಿಥ್ಯಾದೃಷ್ಟಿಯ ಮನೋಧರ್ಮ.

'ಅಳಿಪುಳ್ಳೊಡೆ ನೋಡು. ಇಱಿದೊಡನೆ ಅೞುವುದೆ? ಪೆಣ್ ತಪ್ಪಿ ನಡೆಯೆ, ಛೀ ಕಿಸುಗುಳಂ ಎಂದು ಉೞುವುದೆ ಗೆಲ್ಲಂ' (೨—೩೮): ಇದು ಸದ್ಗತಿ ಸಾಧಕವಾದ ವ್ಯವಹಾರಧರ್ಮ.

'ಮನಸಿಜನ ಮಾಯೆ ವಿಧಿವಿಲಸನದ ನೆರಂಬಡೆಯೆ ಕೊಂದು ಕೂಗದೆ ನರರಂ'(೨—೪೨): ಅಮೃತಮತಿಯ ಕಥೆಯನ್ನು ನಿಷ್ಠುರವಾಗಿ ನಿರೂಪಿಸುವಾಗಲೂ, ಕವಿ ತನ್ನ ಸಹಾನುಭೂತಿಯನ್ನು ಮರೆಯದೆ, ತಪ್ಪಿದವಳನ್ನು ಕನಿಕರದಿಂದ ನಡಸುವುದಕ್ಕೆ, ಈ ಧರ್ಮತತ್ತ್ವದಲ್ಲಿ ಅವನಿಗಿರುವ ನಂಬಿಕೆಯೇ ಕಾರಣ. ಇದಕ್ಕೇ ಸಂಬಂಧಿಸಿದ್ದು, ಮುಂದಿನ ೪೩ನೇ ಪದ್ಯದ ಭಾವ.

'ವಂಚನೆಯೆಲ್ಲಿಯುಂ ಒಳ್ಪನಾಗಲೀಯದು ಕಡೆಯೊಳ್' (೩—೯.) ಹಾಗೆ ವಂಚಿಸಿದರೆ, 'ಒಂದಡಸಿದೊಡೆ ಏೞಡಸಿತು ಎಂಬ ನುಡಿ

ತಪ್ಪುಗುಮೇ' (೩—೧೦.): ಯಶೋಧರನು ತಾಯಿಯೊಡನೆ ಆಡಿದ ವಂಚನೆಯ ಮಾತೂ, ಅಮೃತಮತಿ ವಿಷವಿಕ್ಕಿದ ವಂಚನೆಯ ಕಾರ್ಯವೂ ಅದರ ಫಲಗಳೂ ಇದಕ್ಕೆ ಉದಾಹರಣೆ.

'ಮೇಗಂ ಬಗೆವೊಡೆ ವಧೆ ಹಿತವಾಗದು' (೩—೧೩): ಯಶೋಧರ ಚಂದ್ರಮತಿಯರ ಕಥೆ, ಅಮೃತಮತಿ ವಿಷವಿಕ್ಕಿ ಗಂಡನನ್ನೂ ಅತ್ತೆಯನ್ನೂ ಕೊಂದು ಕೆಟ್ಟ ಕಥೆ—ಇದಕ್ಕೆ ಉದಾಹರಣೆ.

'ಜೀವದಯೆ ಜೈನಧರ್ಮಂ. ಜೀವಹಿತಂ ನಂಬುವವರ್ಗೆ ಹಿಂಸೆಯ ಮೋಹಂ ಭಾವಿತಮೆ'(೩—೧೭.) ಸರ್ವಥಾ ಭಾವಿತವಲ್ಲ, ಎಂಬುದನ್ನು ತೆಳ್ಳನೆ ತಿಳಿಸುವುದೇ ಈ ಕಾವ್ಯದ ಮುಖ್ಯವಾದ ಗುರಿ.

'ಭಾವನೆಯಿಂದಂ ಅಪ್ಪುದು ಆಸ್ರವಂ'(೩—೧೯): ಹಿಟ್ಟಿನಕೋಳಿಯನ್ನೇ ಹೊಡೆದುದಾದರೂ, ಕೊಲ್ಲುತ್ತೇನೆ ಎಂಬ ಭಾವನೆ ಮನಸ್ಸಿನಲ್ಲಿ ಬಂದ ಅಷ್ಟರಿಂದಲೇ ಯಶೋಧರ ಚಂದ್ರಮತಿಯರು ಹೇಗೆ ಏಳು ಜನ್ಮ ಸಂಸಾರದಲ್ಲಿ ತೊಳಲಿದರು ಎಂಬುದೇ ಈ 'ಯಶೋಧರ ಚರಿತೆ.'

'ಇದೇಕೆಂದಾರಱಿವರಯ್ಯ ವಿಧಿ ವಿಲಸನಮಂ' (೩—೨೫): ಇಂಥದೇ ಎರಡು ಮಾತು ಮೇಲೆ ಇದೆ. ನೋಡಿ.

'ಮಾಡಿದುದನ್ ಉಣ್' (೩—೩೦): ಅಮೃತಮತಿ ತಾನು ಬಡಿಸಿದ ವಿಷದ ಲಡ್ಡುಗೆಯನ್ನು ಕುರಿತೇ ಹೀಗೆಂದಳಾದರೂ, 'ಮಾಡಿದ ಭಾವಹಿಂಸೆಯ ದುಷ್ಫಲವನ್ನು ಏಳು ಜನ್ಮ ಅನುಭವಿಸು' ಎಂಬ ಭವಿಷ್ಯಾರ್ಥಸೂಚನೆಯೂ ಅದರಲ್ಲಿ ಅವಳಿಗೇ ತಿಳಿಯದಂತೆ ಅಡಗಿತ್ತು.

'ಆ ಸ್ತ್ರೀಚರಿತಮುದೇಂ, ಕಳೆಯಲರಿದು ಪೆಂಡಿರ ಕೃತಕಂ' (೩—೩೧): ಸ್ತ್ರೀಜಾತಿಯನ್ನೇ ಹೀಗೆ ಸಾಮೂಹಿಕವಾಗಿ ಹಳಿಯುವುದು ಯಾವ ರೀತಿಯ ಧರ್ಮವೋ ಅರ್ಥವಾಗುವುದಿಲ್ಲ. ಆದರೂ ಯಾವ ಧರ್ಮದ ಸಂನ್ಯಾಸಿಯಾದರೂ, ಇಂತಹ ಮಾತನ್ನು ಆಡದಿರುವುದಿಲ್ಲ.

'ಅಘದಿಂ ಜನ್ಮಲತೆಗೆ ಬೀಜಾವಾಪಂ' (೩—೩೨): ಈ ತತ್ತ್ವಕ್ಕೆ ದೃಷ್ಟಾಂತವಾದದ್ದೇ ಇಲ್ಲಿನ ಭವಾವಳಿ.

'ನೋಡ ಪಾಪದ ಫಲಮಂ' (೩—೩೭.): ಇದರ ವಿವರ ಅದೇ ಪದ್ಯದಲ್ಲೇ ಇದೆ.

'ಮಱುಗಿಸದಿರ್ಪುದೆ ಭವಾಂತರ ವ್ಯಾಮೋಹಂ' (೩—೪೨.) ಹಿಂದಿನ ಜನ್ಮದ ಪ್ರೇಮವೂ ದ್ವೇಷವೂ ಮುಂದಿನ ಜನ್ಮಕ್ಕೂ ಹಾಗೇ ಬರುತ್ತದೆಂಬುದನ್ನು ಇಲ್ಲಿನ ಜನ್ಮಾಂತರಕಥೆಗಳಲ್ಲಿ ನೋಡಬಹುದು.

'ದಯಾಮೂಲಂ ಧರ್ಮಂ. ಹಿತಮಿದುಭಯಭವಕ್ಕಂ'(೪—೨೬) ಈ ಮಾತು ಜೈನಧರ್ಮದ ಮುಕುಟ. ಅಕಂಪನರು ಚಂಡಕರ್ಮನಿಗೆ ಮಾಡಿದ ಧರ್ಮೋಪದೇಶದಲ್ಲಿ ಇದು ಮಾಣಿಕ್ಯದಂಥ ಮಾತು.

'ಪಾಪಂ ಸಂಧಿಸುವುದೆ ಪುಣ್ಯಮೂರ್ತಿಯಂ ಕಾಣಲೊಡಂ' (೪—೪೧): ಬೇಟೆಗೆಂದು ಬಂದ ಯಶೋಮತಿಗೆ, ಸುದತ್ತರ ದರ್ಶನದಿಂದ ಬೇಟೆ ಸಿಕ್ಕದೆ ಅವನಿಗೆ ಹಿಂಸೆಯ ಪಾಪ ಬಂಧವಾಗದ್ದು; ಅಭಯರುಚಿ ಅಭಯಮತಿಗಳ ಸಂದರ್ಶನದಿಂದ ಮಾರಿದತ್ತನ ಎಂದಿನಂದದ ನರ ಮೇಧ ತಪ್ಪಿ, ಅವನೂ ಅವನ ಕುಲದೇವತೆಯಾದ ಚಂಡಮಾರಿಯೂ ಸದ್ಧರ್ಮಕ್ಕೆ ಬಂದದ್ದು; ಇವು ಈ ಮಾತಿಗೆ ಉದಾಹರಣೆ.

'ಅಸಾರಂ ಸಂಸಾರಂ ಗಡಂ' (೪—೪೩): ಇದರ ಜೊತೆಗೆ 'ಎನಿತೊಳವಪಾಯಕೋಟಿಗಳ್ ಅನಿತರ್ಕಂ ಗೇಹಮಲ್ತೆ ದೇಹಂ' ಎಂಬುದನ್ನೂ ಓದಿಕೊಳ್ಳಬೇಕು. ಇದನ್ನು ತಿಳಿದೇ, ಈ ಕಾವ್ಯದಲ್ಲಿ ಹಲವರು ಆಗಾಗ ಜಿನದೀಕ್ಷೆಯನ್ನು ಸ್ವೀಕರಿಸಿ, ಉತ್ತಮಗತಿಗೆ ಹೋದದ್ದು. 'ತನುವಾರ್ಗಮಶುಚಿ, ಶುದ್ಧಾತ್ಮನೆ ಶುಚಿ' ಎಂಬುದೂ(೪—೪೨)ಇದೇ.

'ನೋಡ ಧರ್ಮವೊದವಿದ ಪದನಂ' (೪—೫೨.)ಕೋಳಿ ಆಕಡೆ ಕೂಗಿದ್ದೂ, ಅದೇ ಗಳಿಗೆಯಲ್ಲಿ ಯಶೋಮತಿಯ ಬಾಣ ಬಂದು ತಾಗಿದ್ದೂ, ಕೋಳಿಗಳಾಗಿದ್ದವರು ಮನುಷ್ಯ ಜನ್ಮ ತಾಳಿದ್ದೂ, ನೋಡಿದರೆ ಆಶ್ಚರ್ಯವಾಗುತ್ತದೆ.

'ಸಂಕಲ್ಪನವಧೆಗೆ ಇನಿತಾಯ್ತು' (೪—೫೩): ಇದು ಯಶೋಧರ ಚರಿತೆಯ ಶ್ರುತಿ.

'ಧರ್ಮದಿಂದಾಗದುದೇಂ' (೪—೭೧.): ಜೀವದಯೆ ಎಂಬುದು ಯಾರ ಹೆಸರಿದ್ದ ನಾಡಿನಲ್ಲಿ ಇರದೋ ಅಂತಹ ಮಾರಿದತ್ತನಿಗೂ ಇಂತಹ ಉತ್ತಮಗತಿಯಾಯಿತೆಂದ ಮೇಲೆ ಧರ್ಮದ ಅಸಾಧ್ಯಸಾಧನೆ ಎಂಥದು! ಎಂದು ಯಶೋಧರ ಹೀಗೆ ಕೊಂಡಾಡುತ್ತಾನೆ.

# ಹೊಸಗನ್ನಡ ಯಶೋಧರ ಚರಿತೆ

## ಒಂದನೆಯ ಅವತಾರ

೧. ಪುರುದೇವನೇ ಮೊದಲಾದವರು ಒಲಿಸಿದ ಪರಮಶ್ರೀವಧುವನ್ನು ಒಲಿಸಿಯೂ, 'ಪರವನಿತೆಯರಲ್ಲಿ ಅಪೇಕ್ಷೆಯಿಲ್ಲದವನು' ಎನ್ನಿಸಿದ ದೇವರ ದೇವನಾದ ಸುವ್ರತನು (ನಮಗೆ) ಸುವ್ರತವನ್ನು ಕೊಡಲಿ.

೧. ಪುರುದೇವ—ಜೈನರ ಮೊದಲನೆಯ ತೀರ್ಥಂಕರನಾದ ಋಷಭನಾಥ. ಪರಮಶ್ರೀವಧು—ಮುಕ್ತಿಯೆಂಬ ಮದುವೆಯ ಹೆಣ್ಣು. ದೇವರ ದೇವ—ದೇವಾಧಿದೇವ. ಸುವ್ರತ—ಇಪ್ಪತ್ತನೆಯ ತೀರ್ಥಂಕರ. ಸುವ್ರತ—ಜೀವದಯಾಷ್ಟಮಿ ವ್ರತ.

೨. ಭೂಮಿಯಲ್ಲಿ ಸಂಸ್ಕೃತದಿಂದ ಪ್ರಾಕೃತದಿಂದ ಕನ್ನಡದಿಂದ ಆದ್ಯರು ಯಾರು ಈ ಕೃತಿಯನ್ನು ಕೃತಿಮಾಡಿದರು—ಅವರುಗಳ ಸನ್ಮತಿಯು ಸರಸವಾದ ಪದಪದ್ಧತಿಯಲ್ಲಿ ನಮಗೆ ಕೈಕೊಡಲಿ.

೨. ಆದ್ಯರು—ಮೊದಲಿಗರು. ಆದ್ಯರು ಯಾರು ಎಂಬುದಕ್ಕೆ, ರಾಘವಾಚಾರ್ಯರ ಪುಸ್ತಕ, ಪುಟ ೫೫ರಿಂದ ನೋಡಿ. ಕೈಕೊಡು—ನೆರವಾಗು.

೩. ಜೀವದಯಾಷ್ಟಮಿಯಲ್ಲಿ ಶ್ರಾವಕಜನದ ಉಪವಾಸವು ನಡೆಯಲು, ಈ ವಸ್ತುಕಥನದಿಂದ ಕಿವಿಗಳಿಗೆ ಪಾರಣೆ ಉದ್ಭಾವಿಸುವ ಹಾಗೆ ಕವಿಭಾಳಲೋಚನನು (ಇದನ್ನು) ವಿರಚಿಸಿದನು.

೩. ಜೀವದಯಾಷ್ಟಮಿ—ನವರಾತ್ರಿಯಲ್ಲಿ ಬರುವ ನಮ್ಮ ದುರ್ಗಾಷ್ಟಮಿ. ಈ ವ್ರತದ ವಿವರಣೆಗೆ, ರಾಘವಾಚಾರ್ಯರ ಪುಸ್ತಕ ಪುಟ ೧೩೧ ನೋಡಿ. ಶ್ರಾವಕ—ಜೈನ ಗೃಹಸ್ಥ. ಉದ್ಭಾವಿಸು—ಉಂಟಾಗು. ಭಾಳಲೋಚನ—ಹಣೆಯಲ್ಲಿ ಕಣ್ಣಿರುವ ರುದ್ರ. ಕವಿಭಾಳಲೋಚನ ಎಂಬುದು ಜನ್ನನ ಬಿರುದು ಇರಬಹುದು.

೪. ಯಶೋಧರ ಚರಿತ ಕಥಾಶ್ರವಣವೆಂಬ ಚಂದ್ರೋದಯದಲ್ಲಿ (ಈ ಪಾರಣೆಯನ್ನು) ಆಚರಿಸುವ ಜನಕ್ಕೆ ದುರಿತವೆಂಬ ತಮಿಸ್ರವು ಪರೆಯುತ್ತದೆ, ಅಮಲದೃಷ್ಟಿ ಎಂಬ ಕುವಲಯವನವು ಪೊರೆಯೇರುತ್ತದೆ.

೪. ದುರಿತ—ಪಾಪ. ತಮಿಸ್ರ—ಕತ್ತಲೆ. ಪರೆ—ಚೆದರು. ಅಮಲದೃಷ್ಟಿ—ರತ್ನತ್ರಯದಲ್ಲಿ ಮೊದಲನೆಯದಾದ ಸಮ್ಯಕ್ ದರ್ಶನ ಎಂಬ ಶ್ರದ್ಧೆ. ಕುವಲಯವನ—ಕನ್ನೈದಿಲೆಯ ಗುಂಪು. ಪೊರೆಯೇರು—ಕಾಂತಿಗೊಳ್ಳು.

೫. ಭಾರತವರ್ಷದ ಅಯೋಧ್ಯೆಯೆಂಬ ಸುವಿಷಯದಲ್ಲಿ ರಾಜಪುರ (ಎಂಬುದು ಊರು. ಅದು) ಧರೆಗೆ ಶೀರ್ಷಾಭರಣ, ಉತ್ಕರ್ಷ ವಿಲಾಸನದ ಭೂಮಿ, (ಅದು) ಸಕಲ ಜನಕ್ಕೂ ಹರ್ಷವನ್ನು ಕೊಡುವುದು.

೬. ಅದು ಹಿರಿಯ ಸಿರಿಯ ಬಾಳಿಗೆ ಮೊದಲು. ಅದು ತ್ಯಾಗದ ಭೋಗದ ಆಗರ. ಅದು ಸಕಲ ಸುಖಕ್ಕೆ ಜನ್ಮಭೂಮಿ ಎನಿಸಿದುದು. ಅದನ್ನು ಆಳುವವನು ಮಾರಿದತ್ತನೆಂಬ ನೃಪಾಲನು.

೫. ಸುವಿಷಯ—ಒಳ್ಳೆಯ ದೇಶ. ಶೀರ್ಷಾಭರಣ—ತಲೆಯ ಆಭರಣ. ಉತ್ಕರ್ಷ—ಹೆಚ್ಚಾದಂತಹ. ೬. ಆಗರ—ಮನೆ.

೭. ಆ ಪುರದ ತೆಂಕವಂಕದಲ್ಲಿ, 'ಯಾವ ಹೊತ್ತೂ ಅನೇಕ ಜೀವಹತಿ ತನಗೆ ಸುಖವನ್ನು ಉದ್ದೀಪನಗೊಳಿಸುವುದು' ಎನ್ನಿಸುವ, ಪಾಪವೆಂಬ ಕಲೆಯಲ್ಲಿ ಪಂಡಿತೆಯಾದ ಚಂಡಮಾರಿದೇವತೆ ಇರುವಳು.

೮. ತನಗೆ ಅರಸನೊಡನೆ ಪುರಜನವಷ್ಟೂ ಇಷ ಚೈತ್ರ ಎಂಬ ತಿಂಗಳಲ್ಲಿ ಅಖಿಲವಾದ ಅರ್ಚನೆಗಳೊಡನೆ ಜಾತ್ರೆ ನೆರೆಯದೆ ಹೋದರೆ—ಅಷ್ಟನ್ನೂ ಒಮ್ಮೆಗೇ ಪ್ರಳಯದಲ್ಲಿ ನೆರೆಯಿಸುವಳು.

೯. ಆ (ಚಂಡಮಾರಿ) ದೇವಿಯ ಜಾತ್ರೆಗೆ ಮೊಳೆಹೋದ ಎಳೆಯ ಪೆರೆ ಶಿರದ ಗಾಳ; ಕೈಹೋದ ಅಶೋಕ ಉರಿಯ ಉಯ್ಯಾಲೆ; ಕೋಗಿಲೆಯ ಧ್ವನಿ ಮೂದಲೆಯ ಉಲಿ;—(ಹೀಗೆ) ಆಗಲು ಅಂದು ವಸಂತ ಬಂತು.

೭. ತೆಂಕವಂಕ—ದಕ್ಷಿಣದ ತಿರುವು (the Southern bend.) ಜೀವಹತಿ—ಪ್ರಾಣಿವಧೆ. ಉದ್ದೀಪನಗೊಳಿಸು—ಕೆರಳಿಸು. ೮. ಇಷ—ಆಶ್ವಯುಜಮಾಸ. ಪ್ರಳಯದಲ್ಲಿ ನೆರೆಯಿಸು—ಸಂಪೂರ್ಣವಾಗಿ ನಾಶಮಾಡು. ೯. ಮೊಳೆಹೋದ—ಮೊಳಕೆಬಂದ, ಆಗ ತಾನೆ ಹುಟ್ಟಿದ. ಪೆರೆ—ಚಂದ್ರ. ಕೈಹೋದ—ಚಿಗುರಿದ? ಮೂದಲೆಯ ಉಲಿ—ಹಂಗಿಸುವ ಕೂಗು.

೧೦. ವಸಂತನು (ತಾನು ಮಾಡಿಕೊಂಡ) ಹರಕೆಗೆ ಶಿಶಿರವನ್ನೇ ಹಿಡಿದು, ಅಲರಿಹೋದ ಮಾವಿನ ಅಡಿಮುಂಚಿಕೆಯಲ್ಲಿ ಕುಸುರಿತರಿದ ಅಡಗಿನ ಹಾಗೆ—ಆ ವನದಲ್ಲಿ ಉದುರಿದ ಮುತ್ತದ ಮುಗುಳುಗಳು ಎಸೆದುವು.

೧೧. (ಹೇ ಚಂಡ)ಮಾರಿ! ಮಲಯಾನಿಲನು ಹೊಸ ನೀರಜವನವೆಂಬ ಕೆಂಡದಲ್ಲಿ ದಂಡನಮಸ್ಕಾರ (ಹಾಕುತ್ತಾ) ಬರುತ್ತಿದ್ದಾನೆ. ಇತ್ತ ಅವಧರಿಸಬೇಕು—ಎನ್ನುವ ಹಾಗೆ ಆರಗಿಳಿ ವನದಲ್ಲಿ ಉಲಿದುವು.

೧೦. ಅಲರಿಹೋದ—ಹೂಬಿಟ್ಟ. ಅಡಿಮುಂಚಿಕೆ—ಅಡಿಯಲ್ಲಿರುವ ಒಂದು ತೆರದ ಅಟ್ಟಣೆ. ಕುಸುರಿತರಿ—ಸಣ್ಣಸಣ್ಣಗೆ ಕತ್ತರಿಸು. ಅಡಗು—ಮಾಂಸ. ಮುತ್ತದ ಮುಗುಳು—ಮುತ್ತುಗದ (ಕೆಂಪು) ಮೊಗ್ಗು. ಎಸೆ—ಕಂಗೊಳಿಸು. ೧೧. ಮಲಯಾನಿಲ—ಮಲಯಪರ್ವತದಿಂದ ಬೀಸುವ ತಂಪಾದ ಗಾಳಿ. ನೀರಜ—ಜಲದಲ್ಲಿ ಹುಟ್ಟಿದ ತಾವರೆ. ಅವಧರಿಸು—ಗಮನಿಸು. ಉಲಿ—ಕೂಗು. ಅರಗಿಳಿ—ರಾಜಗಿಳಿ.

೧೨. ಹಾಗೆ ದೊರೆವೆತ್ತು ಬಂದ ವಸಂತ(ಮಾಸ)ದಲ್ಲಿ ಆ ಮಾರಿದತ್ತನೂ ಪುರಜನವೂ ತಂತಮಗೆ ಚಂಡಮಾರಿಗೆ ಸಂತೋಷವನ್ನು (ಉಂಟು)ಮಾಡಬೇಕೆಂದು ಜಾತ್ರೆಗೆ ನೆರೆದರು.

೧೨. ದೊರೆವೆತ್ತು—ಲಕ್ಷಣಗಳಿಂದ ಕೂಡಿ. ತಂತಮಗೆ—ತಾವುತಾವಾಗಿಯೇ, ಯಾರಿಂದಲೂ ಹೇಳಿಸಿಕೊಳ್ಳದೆ.

೧೩. ಸುರಿಗಿಯಿಂದ ಇರಿದು ಅರ್ಚನೆಯಾಡುವ, ಹರಕೆಯನ್ನು ಒಪ್ಪಿಸುವ ಲಕ್ಷಲೆಕ್ಕದ ಲೆಂಕರುಗಳೊಡನೆ ಬಲಗೊಂಡು, ದೇವಿಯ ಚರಣಗಳಿಗೆ ಎರಗಿ, ರಂಗಮಂಟಪದ ಎಡೆಯಲ್ಲಿ

೧೪. ನಿಂತು, ನರಪತಿಯು ತಳಾರನಿಗೆ ಎಂದನು: "ನೀನು ಮನುಜಯುಗವನ್ನು ಬರಮಾಡಿಸು. ಮೊದಲು ಕೊಂದು ಅರ್ಚಿಸುತ್ತೇನೆ. ಪೂಜೆಯಲ್ಲಿ ಎಂದಿನ ಪರಿ ತಪ್ಪಿದರೆ, ದೇವಿ (ನಮಗೆ ಕೇಡುಮಾಡಲು) ತಪ್ಪದೆ ಬಿಡುವುದಿಲ್ಲ.

೧೩. ಸುರಿಗಿ—ಕೈಯ ಕಿರುಗತ್ತಿ. ಲೆಂಕರು—ಸೇವಕರು. ಬಲಗೊಂಡು—ಪ್ರದಕ್ಷಿಣೆಮಾಡಿ. ೧೪. ತಳಾರ—ಊರಿನ ತಳವಾರ. ಯುಗ—ಜೋಡಿ.

೧೫. ತಡವಾದೀತು. ಪೌರರು ಹಲವು ಜೀವರಾಶಿಯ ಬಲಿಯನ್ನು ಕೊಡಬೇಕಾಗಿದೆ. (ಆದ್ದರಿಂದ ಬೇಗ) ನಡೆ" ಎನ್ನಲು; 'ಪ್ರಸಾದ. (ನಾನು ಹೇಳಿದ ಕೂಡಲೆ) ಆಗಲೇ ನನ್ನ ಕಿಂಕರರು (ಮನುಜಯುಗವನ್ನು) ಹಿಡಿದುತರದೆ ಬಿಡುವುದಿಲ್ಲ' ಎನ್ನುತ್ತಾ—

೧೬. ಚಂಡಕರ್ಮನೆಂಬ ತಳಾರನು, ಕಿರುಹರೆಯದ ಶುಭ ಲಕ್ಷಣದ ಅರಿಕೆಯ ಸತ್ಕುಲದ ಮರ್ತ್ಯಯುಗಲಕವನ್ನು ತಾನು ಅರಸಲು ಬಲಾರಿಯ ವನದಿಂದ ಹೊರಹೊರಟನು.

೧೬. ಕಿರುಹರೆಯ—ಚಿಕ್ಕಪ್ರಾಯ. ಅರಿಕೆಯ—ಪ್ರಸಿದ್ಧವಾದ. ಯುಗಲಕ—ಮುದ್ದಾದ ಚಿಕ್ಕ ಜೋಡಿ. ಅರಸು—ಹುಡುಕು. ಬಲಾರಿ—ಚಂಡಮಾರಿ.

೧೭. ಇತ್ತ ಬಳಿಕ, ಉತ್ತಮವಾದ ಪಂಚಶತ ಯತಿಗಳ ಸಮಿತಿಯೊಡನೆ ಕೂಡಿ, ಗಮನಪ್ರಾಯಶ್ಚಿತ್ತ ನಿಮಿತ್ತದಿಂದ ಬಂದು, ಸುದತ್ತಾಚಾರ್ಯರು (ರಾಜ)ಪುರದ ಉಪವನವನ್ನು ಸಮೀಪಿಸಿದರು.

೧೮. ಅವರ ಗುಣ, ಅವರ ಸಂಯಮ, ಅವರ ತಪಶ್ಚರಣ ಎಂಬುದು ಅವರಿವರ ಅಳವಲ್ಲ; ಅವರ ಹೆಸರನ್ನು ಕೊಂಡ ನಾಲಗೆ (ಹಾಗೆ ಕೊಂಡ) ಬಳಿಕ ತಾಯ ಮೊಲೆಹಾಲಿನ ಹನಿಯನ್ನು ಸವಿದು ಅರಿಯದು.

೧೭. ಪಂಚಶತ—ಐನೂರು. ಸಮಿತಿ—ಗೋಷ್ಠಿ, ಗುಂಪು. ಗಮನಪ್ರಾಯಶ್ಚಿತ್ತನಿಮಿತ್ತ—ನಡೆಯುವಾಗ ಆಗಿರಬಹುದಾದ ಜೀವಹಿಂಸೆಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂಬ ಕಾರಣ. ಉಪವನ—ಹೊರಗಿನ ತೋಟ. ೧೮. ಅಳವು-ಅಳತೆ.

೧೯. ಮುನಿಸಮುದಾಯ ಸಮೇತನಾಗಿ, ವಿನೇಯಜನವೆಂಬ ವನಜವನಕ್ಕೆ ದಿವಾಕರನಾದ ಆ ಮುನಿಪನು ಹಾಗೆ ಪರ್ವನಿಮಿತ್ತವಾಗಿ ಉಪವಾಸವನ್ನು ತಳೆದು, ಬಳಿಕ ಬಾಲಕಯುಗವನ್ನು

೨೦. ಚರಿಗೆಗಾಗಿ ಬೀಳ್ಕೊಡಲು, ಆ ಯುಗಳವು ಗುರುಗಳ ಚರಣಕ್ಕೆ ಎರಗಿ ಪೊರಮಟ್ಟಾಗ—ತರುಣವಾದ ವನಹರಿಣಗಳ ಯುಗವನ್ನು ತರಕ್ಷು ಹಿಡಿಯುವಂತೆ (ಆ ಯುಗವನ್ನು) ಚಂಡಕರ್ಮನು ಹಿಡಿದನು.

೧೯. ಸಮುದಾಯ—ಸಮಿತಿ. ವಿನೇಯಜನ—ವಿನಯವಂತರು. ವನಜ—ತಾವರೆ. ದಿವಾಕರ—ಸೂರ್ಯ. ಪರ್ವ—ಜೀವದಯಾಷ್ಟಮಿಯ ಹಬ್ಬ. ಯುಗ—ಎರಡು. ೨೦. ಚರಿಗೆ—ಭಿಕ್ಷೆ, ಜೈನರ ಭೋಜನ. ಎರಗು—ನಮಿಸು. ವನಹರಿಣ—ಕಾಡುಜಿಂಕೆ. ತರಕ್ಷು—ಹುಲಿ.

೨೧. ಅಭಯರುಚಿ ಅಭಯಮತಿ ಎಂಬ ಉಭಯವನ್ನು ಆ ಪಾಪಕರ್ಮನು ಒಯ್ಯುವ ಎಡೆಯಲ್ಲಿ, ಮತ್ತೆ ಅಭಯರುಚಿ ತಂಗಿಗೆ

ಎನ್ನುತ್ತಾನೆ: "ಎಲಗೆ ತಾಯೆ! ಮರಣದ ದೆಸೆಯಲ್ಲಿ ಅಭೀತೆಯಾಗು.

೨೨. "ನಿಯತಿಯನ್ನು ಯಾರು ಮೀರಿಯಾರು? ಭಯ ಏನು ಮಾಡುತ್ತದೊ? ಮುಟ್ಟಿದ ಎಡೆಗೆ ಸೈರಿಸುವುದೆ, ಕೇಳು, ಇದೆ ನಯ. (ನಾವು) ಹೆತ್ತ ಪರೀಷಹದ ಜಯವೇ ತಪಸ್ಸು (ಎಂಬುದು.) ತಪಸ್ಸಿಗೆ (ಇದಲ್ಲದೆ) ಬೇರೆ ಎರಡು ಕೋಡು ಉಂಟೆ?"

೨೧. ಉಭಯ—ಎರಡು. ಪಾಪಕರ್ಮ—ಚಂಡಕರ್ಮ. ಅಭೀತೆ—ಭಯವಿಲ್ಲದವಳು. ೨೨. ನಿಯತಿ—ಕರ್ಮಕ್ಕೆ ತಕ್ಕ ಫಲ ಎಂಬ ವಿಧಿ. ನಯ—ಅನುಸರಿಸಬೇಕಾದ ನೀತಿ. ಹೆತ್ತ—ಪಡೆದ. ಪರೀಷಹ—ತಾನಾಗಿಯೇ ಬಂದು ಒದಗುವ ತೊಂದರೆಗಳು; ಉದಾ: ಗುರುಗಳ ಆಜ್ಞೆಯನ್ನು ನಡಸುವುದಕ್ಕೆ ಅಡ್ಡಿಯಾಗಿ ಬಂದ ಈ ಚಂಡಕರ್ಮನ ಪೀಡನೆ. ಕೋಡು—ಕೊಂಬು, ವಿಶೇಷವಾದ ಲಕ್ಷಣ.

೨೩. ಅಣ್ಣನ ಮಾತನ್ನು ಮನಸ್ಸಿನಲ್ಲಿ ತಿಣ್ಣವಾಗಿ ತಳೆದು, ಅನುಜೆ ಎಂದಳು: "(ನಾವು) ಮಾಡಿದುದನ್ನು ನಾವು ಉಣ್ಣದೆ ಹೋಗುವೆವೆ? ಭಯವೇಕೆ, ಅಣ್ಣ? ಭವದ ಪ್ರಕೃತಿ ವಿಕೃತಿ ನಾವು ಅರಿಯದುದೇನು?

೨೪. "ಅಪಾಯಕೋಟಿಗಳು ಎಷ್ಟು ಉಂಟೋ ಅಷ್ಟಕ್ಕೂ (ಈ) ದೇಹ ಗೇಹವಲ್ಲವೆ? ಇದನ್ನು ನೆಟ್ಟನೆ ಹೊತ್ತು ಸುಖವನ್ನು ಅರಸುವ ಮನುಜನು ಮೊರಡಿಯಲ್ಲಿ ಮಾಯ್ದ ಫಲವನ್ನು ಅರಸದಿರನು.

೨೫. "ಬೇಡಿದ ಕಾಡಿನಲ್ಲಿ ಮಳೆಯಾಯಿತು. ಇದರ ಹೊರೆಯನ್ನು (ನಾವು) ಈಡಾಡುವ. ನನಗೂ ನಿನಗೂ (ಈ) ಮೂಡುವ ಮುಳುಗುವ ದಂದುಗವು ಆಡಿದ ಹೊಲ, ಉಂಡ ಮದ್ದು, ಕಂಡ ವಿಚಾರ."

೨೩. ತಿಣ್ಣ—ದೃಢ. ಅನುಜೆ—ತಂಗಿ. ಭವ—ಸಂಸಾರ. ಪ್ರಕೃತಿ ವಿಕೃತಿ—ಹುಟ್ಟು ಸಾವು. ೨೪. ಗೇಹ—ಮನೆ. ಮೊರಡಿ—ಕಲ್ಲು ಗುಡ್ಡ. ಮಾಯ್ದ—ಮರೆಯಾದ. ೨೫. ಇದರ—ಈ ದೇಹದ. ಈಡಾಡು—ಬಿಸಾಡು. ಮೂಡುವ ಮುಳುಗುವ—ಹುಟ್ಟುವ ಸಾಯುವ. ದಂದುಗ—ವ್ಯಥೆ. ಮದ್ದು—ಔಷಧ.

೨೬. ಹೀಗೆ ಹೀಗೆ ಆ ನೃಪೇಂದ್ರನ ತನುಜಾತರು ಒಬ್ಬರನ್ನು ಒಬ್ಬರು ಸಂತೈಸುತ್ತಾ, ಹಸಿದ ಕೃತಾಂತನ ಬಾಣಸುವಿನ ಹಾಗಿದ್ದ ಮಾರಿಯ ಮನೆಯನ್ನು ನಿಶ್ಚಿಂತವಾಗಿ ಹೊಕ್ಕರು.

೨೬. ತನುಜಾತರು—ಮಕ್ಕಳು. ಈ ಇಬ್ಬರು ಬ್ರಹ್ಮಚಾರಿಗಳೂ ರಾಜಕುಮಾರರೆಂಬುದು ಮುಂದೆ ಕತೆಯಲ್ಲಿ ಕಂಡುಬರುತ್ತದೆ. ಕೃತಾಂತ—ಕೊನೆಗಾಣಿಸುವ ಯಮ. ಬಾಣಸು—ಅಡಿಗೆಯ ಮನೆ.

೨೭. ಆದರಲ್ಲಿ (ಆ ಮಾರಿಯ ಮನೆಯಲ್ಲಿ) ಎಲ್ಲಿ ನೋಡಿದರೂ ತಳವನ್ನು ಉಡಿದು ಇಡುವ, ಕಣ್ಣನ್ನು ಕಳೆದು ಏರಿಸುವ, ಕರುಳ ತೋರಣವನ್ನು ಕಟ್ಟುವ, ಕಾಲುಗಳನ್ನು ಉರಿಸಿ ನೆತ್ತರಿನ ಕೂಳುಗಳನ್ನು ಅಡುತ್ತಿರುವ ವೀರರು!

೨೮. ತಾಳುಗೆಯನ್ನು ಉರ್ಚ್ಚಿ, ನೆತ್ತಿಯ ಗಾಳನ್ನು ಗಗನದಲ್ಲಿ ಎಳಲುವ ಬಾರಿಯ ವೀರರು, ಪಾಪವೆಂಬ ಜೋಳದ ಬೆಳಸಿಗೆ ಬೆಚ್ಚು ಕಟ್ಟಿದ ತೆರದಿಂದ, ಪಾಳಿಯಲ್ಲಿ ಎಸೆದರು.

೨೯. ಆಡು ಕುರಿ ಕೋಳಿ ಕೋಣನ ಕೂಡಿದ ಹಿಂಡು ಒಳರಿ ಪೆಳರಲು, (ಆದರ) ಮಾರ್ದನಿಯಿಂದ (ಅದರ) ಕೂಡೆ ವನವು ಅತ್ತಿತು. ಆಗ ಅವುಗಳ ಕೋಟಲೆಗೆ ಉರ್ವರೆ ಬೀಟಿಯಿಂದ ಎದೆಯೊಡೆಯಿತು.

೩೦. ಅಬ್ಬೆ (ತಾಯಿಯಾದ ಮಾರಿ) ಹಿರಿದಾದ ಆಡಗಿನ ಹಿರಿಯ ವ್ಯಸನದಿಂದ ಹೊರಗಿನ ಜೀವಪ್ರಸರವನ್ನೂ ಹಲವು ಮುಖದಿಂದ ಅವಲೋಕಿಸುವ ಹಾಗೆ—ಮದಿಲಲ್ಲಿ ದಿಕ್ಕುದಿಕ್ಕಿಗೂ ನರಶಿರಗಳು ತೆತ್ತಿಸಿ ಮೆರೆದುವು.

೨೭. ತಳ—ಕೈ. ಉಡಿದು ಇಡು—ಮುರಿದು ಎಸೆ. ಏರಿಸು—ಮೇಲೆ ಎಸೆ. ನೆತ್ತರಿನ ಕೂಳು—ರಕ್ತದ ಅನ್ನ. ಅಡು—ಬೇಯಿಸು. ೨೮. ತಾಳುಗೆ—ಅಂಗಳು. ಉರ್ಚಿ—ಕಿತ್ತು. ಎಳಲು—ನೇತಾಡು. ಬಾರಿಯ ವೀರರು—ತಮ್ಮ ಸರದಿಯ ಪ್ರಕಾರ ಮಾರಿಗೆ ತಮ್ಮನ್ನು ಕೊಂದು ಅರ್ಪಿಸಿಕೊಳ್ಳುವ ವೀರರು. ಬೆಚ್ಚು—ಬೆದರಿಸುವ ಬೊಂಬೆ (Scare-crow.) ಪಾಳಿ—ಸಾಲು, ಅಥವಾ ಪ್ರಾಕಾರದ ಗೋಡೆ, ಇರಬಹುದು. ೨೯. ಒಳರು—ಅರಚು. ಪೆಳರು—ಹೆದರು. ಮಾರ್ದನಿ—ಪ್ರತಿಧ್ವನಿ. ಬೀಟಿ—ಬಿರುಕು. ನೆಲ ಬಿರುಕು ಬಿಟ್ಟುದನ್ನು ನೋಡಿದರೆ, ಭೂಮಿಯ ಎದೆ ಬಿರಿದಿದೆಯೋ ಎಂಬಹಾಗಿತ್ತು. ೩೦. ಅಬ್ಬೆ—ತಾಯಿ. ಆಡಗು—ಮಾಂಸ. ವ್ಯಸನ—ಚಟ. ಪ್ರಸರ—ಹಿಂಡು. ಮದಿಲು—ಪ್ರಾಕಾರದ ಗೋಡೆ. ತೆತ್ತಿಸಿ—ಜೋಡಿಸಲ್ಪಟ್ಟು.

೩೧. ಭೈರವನ ಯಮನ ಮಾರಿಯ ಮೂರಿಯ ಹಾಗೆ ನಿಂತ ಮಾರಿದತ್ತನು (ಆ) ಲಲಿತಾಕಾರರ, ಧೀರರ, (ಅಲ್ಲಿಗೆ) ಬಂದ (ಆ) ಕುಮಾರರ ರೂಪಿಗೆ ಠಕ್ಕುಗೊಂಡ ಹಾಗೆ ಇದ್ದನು.

೩೧. ಮೂರಿ—ಗೂಳಿ, ಕೋಣ. ತಕ್ಕುಗೊಳ್ಳು—ದಿಗ್ಭ್ರಮೆಗೊಳ್ಳು, ನಿಶ್ಚೇಷ್ಟಿತನಾಗು.

೩೨. ಅರಸನ ಕೆಲಬಲದವರುಗಳು "ನೃಪೇಂದ್ರನನ್ನು ನೀವು ಹರಸಿರಿ, ಹರಸಿರಿ" ಎನ್ನಲು; ಮಂದರೆಧೀರನಾದ ಅಭಯರುಚಿಯು "ನೃಪವರ, ನಿರ್ಮಲವಾದ ಧರ್ಮದಿಂದ ಧರೆಯನ್ನು ಪಾಲಿಸು"

೩೩. ಎಂದು ಹರಸಿದರೆ; ನೃಪನು ಹೊಯ್ಯದೆ ನಿಂತು, ಮನಸ್ಸಿನಲ್ಲಿ ಎಂದನು: "ಈ ದೇಗುಲವನ್ನು ಬಂದು ಹೊಕ್ಕೊಡನೆ ಜೀವವು ನಿಂತು ಅರಿಯದು. (ಇದಕ್ಕೆ) ಮುಂಚೆ ಇಂಥವರನ್ನು ಕಂಡು ಅರಿಯೆನು.

೩೪. "(ಒರೆಯಿಂದ) ಕಿತ್ತ ಕರವಾಳಿಗೂ ನನಗೂ ಮೃತ್ಯುವಿನ ಹಾಗಿದ್ದ ಮಾರಿಗೂ ಬೆದರದೆ ನಿಂತು, (ನನಗೆ) ಅಳ್ತಿಯನ್ನೇ ನುಡಿದರು. ಇವರ ನೆಗಳ್ತೆ ತುಂಬಾ ಹಿರಿದು. ಅಕಟ, ಕುಮಾರರು ಧೀರರು!

೩೫. "ಜವಳಿಯಾದ ಪೆರೆ ಮನುಜರೂಪದಿಂದ ಅವನಿಯಲ್ಲಿ ಒಗೆದ ಹಾಗೆ (ಇವರಿಬ್ಬರ) ಕಾಂತಿ ಮೆರೆಯುವುದು. ಈ ದಿನ ಇವರುಗಳ ಚೆಲ್ವಿಕೆ ಹೀಗೆ (ಇದೆ.) ಕಣ್ಣುಗಳಿಗೆ ತವರಾಜವಾದ ಈ ಬಾಲಕರನ್ನು ಇಂದು ಕಂಡೆನು."

೩೨. ಮಂದರಧೀರ—ಮಂದರದಂತೆ ಅಚಲಿತವಾದ ಧೈರ್ಯವುಳ್ಳವನು. ೩೩. ದೇಗುಲ—ದೇವಾಲಯ. ನಿಂತು ಅರಿಯದು—ಧೈರ್ಯದಿಂದ ಸ್ಥಿರವಾಗಿ ನಿಲ್ಲದು. ೩೪. ಕರವಾಳ—ಕೈಯ ಕತ್ತಿ. ಅಳ್ತಿ—ಪ್ರೀತಿ. ನೆಗಳ್ತೆ—ನಡತೆ. ೩೫. ಪೆರೆ—ಚಂದ್ರ. ಅವನಿ—ಭೂಮಿ. ಒಗೆ—ಹುಟ್ಟು. ತವರಾಜ—ಒಂದುವಿಧದ ಸಕ್ಕರೆಯಂತೆ.

೩೬. (ಎಂಬುದಾಗಿ ಮಾರಿದತ್ತನು ಚಿಂತಿಸಿ, ಪ್ರಕಾಶವಾಗಿ) "(ನೀವು) ಯಾವ ಕುಲ? ಯಾರ ತನಯರು? ಯಾವ ಎಡೆಯಿಂದ ಬಂದಿರಿ? ಬಾಲ್ಯದಲ್ಲಿ ಈ ಭಿಕ್ಷಾವೃತ್ತಿ ಏಕೆ?" ಎಂದು ಬೆಸಗೊಳಲು; ಕುಮಾರನು "ಭೂವರ, ಕೇಳು" ಎಂದು ಅಂದು ಇಂತೆಂದನು:

೩೭. "ಧರ್ಮಪರರಿಗಲ್ಲದೆ ನಮ್ಮಯ ನಿರ್ಮಲಚಾರಿತ್ರವು ಇಂಬುಕೈಯದು. ನಿನಗೆ ಆ ಧರ್ಮದ ಹೋದ ಹೊಲಬು ಅದು ನರ್ಮದೆಗಿಂತ ಗೆಂಟು. ಅದೇಕೆ ನಮ್ಮನ್ನು ಕೇಳುವೆ?

೩೮. "ಆ ಮಾತು ಅಲ್ಲಿವರೆಗೆ ಇರಲಿ, ಎಲೆ ಭೂಮೀಶ್ವರ. ನಿನಗೆ ಯಾವುದು ಪಥ್ಯ, ಅದನ್ನು ಮಾಡು. ನಮಗೆ ಆಮೂಲ ಚೂಲವೂ ತಲಾಮಲಕವೂ ಆದ ಭವನಿಬದ್ಧವು ನಮ್ಮನ್ನು ಅಳಲಿಸಿತು.

೩೯. "ಗುಣಿಗಳ ಗುಣವೆಂಬ ರತ್ನಗಳ ವಿಭೂಷಣವು ವಿಕಲ ಹೃದಯರಾದವರಿಗೆ ಎಸೆಯುವುದೆ? ನೃಪರಲ್ಲಿ ಅಗ್ರಣಿ, ಹೇಳು, ತುಪ್ಪು ಏರಿದ ದರ್ಪಣದಲ್ಲಿ ಪ್ರತಿಬಿಂಬವು ಪ್ರಜ್ವಲಿಸಲು ಸಮರ್ಥ ವಾಗುವುದೆ?"

೩೬. ತನಯರು—ಮಕ್ಕಳು. ಎಡೆ—ಸ್ಥಲ. ಬೆಸಗೊಳು—ಪ್ರಶ್ನಿಸು. ೩೭. ಇಂಬುಕೈ—ಹಿತವಾಗು, ರುಚಿಸು. ಹೋದ—ನಿನ್ನಪಾಲಿಗೆ ನಷ್ಟವಾದ. ಹೊಲಬು—ನಡೆದು ನಡೆದು ಗುರುತುಬಿದ್ದ ದಾರಿ. ಗೆಂಟು—ದೂರ. ನರ್ಮದೆಗೂ ರಾಜಪುರಕ್ಕೂ ಎಷ್ಟು ದೂರವೋ ಧರ್ಮಕ್ಕೂ ಮಾರಿದತ್ತನಿಗೂ ಅದಕ್ಕಿಂತ ಹೆಚ್ಚು ದೂರ. ೩೮. ಪಥ್ಯ—ಆರೋಗ್ಯಕರ. ಆಮೂಲಚೂಲ — ಬುಡದಿಂದ ಹಿಡಿದು ತುದಿಯವರೆಗೆ. ತಲಾಮಲಕ—ಅಂಗೈಯ ನೆಲ್ಲಿಯಕಾಯಿ, ಅಷ್ಟು ಪರಿಚಿತ. ಭವನಿಬದ್ಧ—ಸಂಸಾರದ ಬಂಧ. ಅಳಲಿಸು—ದುಃಖಪಡಿಸು. ೩೯. ವಿಕಲಹೃದಯ—ದಯೆಯೆಂಬ ಕಳೆಯನ್ನು ಕಳೆದುಕೊಂಡ ಹೃದಯವುಳ್ಳವನು. ಎಸೆ—ಕಂಗೊಳಿಸು. ತುಪ್ಪು—ಜಿಡ್ಡು. ದರ್ಪಣ—ಕನ್ನಡಿ. ಪ್ರಜ್ವಲಿಸು—ಬೆಳಗು.

೪೦. (ಅಭಯರುಚಿ) ಹೀಗೆನ್ನಲಾಗಿ; ಆ ಕುಮಾರನ ದಂತ ಪ್ರಭೆ ಎಂಬ ಶೀತಕರನು (ಮಾರಿದತ್ತನ) ಉದಯದ ಅಘಧ್ವಾಂತಗಳ ಓಘವೆಂಬ ಮಧುಪಗಳ ಮಾಲಿಕೆಯನ್ನು ತೊಲಗಿಸಲಾಗಿ, ಅವನ (ಎಂದರೆ ಆ ಮಾರಿದತ್ತನ) ಕರಗಳೆಂಬ ಸರಸಿರುಹಗಳು ಮುಗಿದುವು.

೪೦. ದಂತಪ್ರಭೆ—ಹಲ್ಲಿನ ಕಾಂತಿ. ಶೀತಕರ—ಚಂದ್ರ. ಅಘಧ್ವಾಂತ—ಪಾಪವೆಂಬ ಕತ್ತಲೆ. ಓಘ—ಗುಂಪು. ಮಧುಪ—ದುಂಬಿ. ಮಾಲಿಕೆ—ಸಾಲು. ಸರಸಿರುಹ—ತಾವರೆ.

೪೧. (ಆಗ) ಧನವನ್ನು ಕಂಡ ದರಿದ್ರನ ಮನಸ್ಸಿನ ಹಾಗೆ ಪರಿಜನಗಳ ನೊಸಲು ಆ ವಿನಯನಿಧಿ(ಯಾದ ಅಭಯರುಚಿ)ಗೆ ಎರಗಿದುವು. (ಅಭಯರುಚಿ) ಕುಮಾರಕನು ಅನುರಾಗದಿಂದ ಮಾರಿದತ್ತ ವಿಭುವಿಗೆ ಇಂತೆಂದನು:

೪೨. "ಭಲರೆ, ನೃಪೇಂದ್ರಾ! (ನಿನ್ನ) ಮನಸ್ಸನ್ನು ದಯೆಯಲ್ಲಿ ನೆಲೆಗೊಳಿಸಿದೆ! ಅಮಮ! ನೀನು ಕೇಳಿದುದು ಸತ್ಫಲವಾಯಿತು. ಧರ್ಮಪಥದಲ್ಲಿ (ನೀನು) ಸಂದರೆ, ನಿಲ್ಲುತ್ತೀಯೆ. ಕಾಲಲಬ್ಧಿ ಹೊಲಬು ಕೆಡಿಸುವುದೇ ?

೪೩. "(ನೀನು) ಹೇಗೆ ಬೆಸಗೊಂಡೆ, ಬೆಸಗೊಂಡ ಹಾಗೆಯೇ ದತ್ತಾವಧಾನನಾಗು. ಈ ಸತ್‌ಕಥನವು ನಿನಗೆ ಜಯಶ್ರೀ ಎಂಬ ಕಾಂತೆಯನ್ನೂ ಪರಮಶ್ರೀ ಎಂಬ ಕಾಂತೆಯನ್ನೂ ಕೊಡುತ್ತದೆ.

೪೪. "ಶ್ರೀಮಂತನಾದ ತೀರ್ಥಾಧಿಪನ ವದನವೆಂಬ ಅಂಭೋಜ ದಿಂದ ಸರ್ವಭಾಷಾಸಾಮಾನ್ಯವಾದ ಶ್ರೀವಚನವು ಒಗೆಯಿತು. ಆ ವಚೋಮಾರ್ಗದಿಂದ (ಮಾತ್ರವಲ್ಲದೆ) ಮತ್ತೆ ನಾವೂ ಕಂಡು ಉಂಡು ದರ ಕಥೆಯನ್ನು ಹೇಳುತ್ತೇನೆ. (ರಾಜನೂ ಪುರಜನರೂ) ಕೇಳಿರಿ" ಎಂದು ಆ ಭೂಮೀಶನಿಗೆ ಅಂದು ಅಭಯರುಚಿ ಹೀಗೆಂದು ಹೇಳಲು ತಗುಳಿದನು.

೪೧. ಪರಿಜನ—ಸುತ್ತ ನಿಂತವರು. ನೊಸಲು—ಹಣೆ. ವಿಭು—ರಾಜ. ೪೨. ನೆಲೆಗೊಳಿಸು—ಸ್ಥಿರವಾಗಿ ನಿಲ್ಲಿಸು. ಧರ್ಮಪಥ—ಧರ್ಮದ ದಾರಿ. ಸಂದರೆ—ಹೋಗಿ ಸೇರಿದರೆ. ಕಾಲಲಬ್ಧಿ—ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಸಂಬಂಧಿಸಲು ಕೂಡಿಕೊಂಡು ಬರಬೇಕಾದ ಕಾಲವಿಶೇಷ. ಹೊಲಬುಗೆಡಿಸು— ದಾರಿತಪ್ಪಿಸು. ೪೩. ಬೆಸಗೊಳು—ಪ್ರಶ್ನಿಸು. ದತ್ತಾವಧಾನ—ತನ್ನ ಅವಧಾನವನ್ನು ಎಂದರೆ ಗಮನವನ್ನು ದತ್ತ, ಎಂದರೆ ಕೊಟ್ಟವನು. ಸತ್‌ಕಥನ—ಒಳ್ಳೆಯ ಕಥೆ. ಜಯಶ್ರೀ —ಇಹದಲ್ಲಿ ಸತ್ಫಲ. ಪರಮ ಶ್ರೀ—ಮುಕ್ತಿ. ೪೪. ಶ್ರೀಮಂತ—ಮುಕ್ತಿಶ್ರೀ ಯನ್ನು ಪಡೆದವನು. ತೀರ್ಥಾಧಿಪ—ತೀರ್ಥಂಕರ; ಜೈನಧರ್ಮಕ್ಕೆ ತೀರ್ಥ ಎಂದು ಹೆಸರು. ವದನ—ಮುಖ. ಅಂಭೋಜ—ತಾವರೆ. ಸರ್ವಭಾಷಾ ಸಾಮಾನ್ಯವಾದ ಈ ಶ್ರೀವಚನವು ಕೇವಲ ಓಂಕಾರಮಾತ್ರವಾದರೂ ಅದನ್ನು ಕೇಳಿದ ಆಯಾ ಭಾಷೆಯ ವರಿಗೆ ಆಯಾಭಾಷೆಯ ಮಾತೇ ಇದ್ದಹಾಗೆ ಇರುತ್ತದೆ. ಇದಕ್ಕೆ 'ಅನಾಕ್ಷರೀವಾಣೀ' ಎಂದೂ 'ದಿವ್ಯಧ್ವನಿ' ಎಂದೂ ಹೆಸರುಂಟು. ಕಂಡು ಉಂಡದ್ದು—ನೋಡಿ ಅನುಭವಿ ಸಿದ್ದು. ತಗುಳು—ತೊಡಗು. ಅಭಯರುಚಿ ಹೇಳಿದ ಕಥೆ ಮುಂದಿನ ಅವತಾರ ಗಳಲ್ಲಿದೆ.

೪೫. ಅಭಯರುಚಿಕುಮಾರನು ಹಿಂಸಾರಭಸಮತಿಯಾದ ಮಾರಿದತ್ತನಿಗೆ ಸಯ್ಪನ್ನು ಹೇಳಿ, ಧರ್ಮಕ್ಕೆ (ಅವನನ್ನು) ತಂದ ಈ

ಶುಭಕಥನವನ್ನು ಅತಿಯಾದ ಆನಂದದಿಂದ ಕೇಳುವ ಭವ್ಯಪ್ರಭುಸಭೆಗೆ ಮಂಗಳವಾದ ಶ್ರೀವಿಲಾಸವು ಎಸೆದಿರುತ್ತದೆ.

೪೫. ಹಿಂಸಾರಭಸಮತಿ—ಹಿಂಸೆಯಲ್ಲಿ ಹೋಗಿ ಧುಮುಕುವ ಬುದ್ಧಿಯುಳ್ಳವನು. ಸಯ್ಪು—ಪುಣ್ಯಕರವಾದ ಒಳ್ಳೆಯದು. ಭವ್ಯಪ್ರಭು—ಭವ್ಯರಾದ ಉತ್ತಮರು. ಭವ್ಯರೆಂದರೆ ಜೈನಧರ್ಮದಲ್ಲಿ ಭಕ್ತಿಯುಳ್ಳವರು. ಎಸೆ—ಕಂಗೊಳಿಸು.

# ಎರಡನೆಯ ಅವತಾರ

೧. ಆ ಕಥೆ ಮತ್ತೆ ಹೇಗೆಂದರೆ: ಇಳಾ ಎಂಬ ಕಾಂತೆಗೆ ಅವಂತಿ ಎಂಬ ವಿಷಯವು ಆಸ್ಯದ ಹಾಗೆ ಶೋಭೆಗೆ ಆಕರವಾಯಿತು. ಅದರಲ್ಲಿ (ಆ ವಿಷಯದಲ್ಲಿ) ಉಜ್ಜೇನಿಯೆಂಬ ಪುರವು ನಾಸಾಕುಟ್ಮಲದ ಹಾಗೆ ಮೆರೆವುದು.

೧. ಇಳಾ—ಭೂಮಿ. ಕಾಂತೆ—ಕಾಂತಿಯುಳ್ಳ ಸ್ತ್ರೀ. ವಿಷಯ—ದೇಶ. ಆಸ್ಯ—ಮುಖ. ಶೋಭೆ—ಕಾಂತಿ. ಆಕರ—ಪಾತ್ರ. ನಾಸಾಕುಟ್ಮಲ—ಮೊಗ್ಗಿನಂತಹ ಮೂಗು.

೨. ಆ ಪುರದ ಅರಸನಾದ ಯಶೌಘನು, (ತನಗೆ) ನತರಾದ ಭೂಮೀಪಾಲರ ಮಕುಟವುಳ್ಳ ಮಸ್ತಕದಿಂದ ತನ್ನ ತೇಜೋರೂಪಕವೇ ಪದ್ಮರಾಗದ ದೀಪದ ಹಾಗೆ ಮೆರೆಯುವಷ್ಟರಮಟ್ಟಿಗೆ ಮೆರೆಯುವನು.

೨. ನತರು—ಬಾಗಿದವರು, ವಿಧೇಯರು. ಮಕುಟ-ಕಿರೀಟ. ಮಸ್ತಕ-ತಲೆ.

೩. ಭೂವರತಿಲಕನಾದ ಯಶೌಘನ ಅನುರೂಪವಾದ ಕಣ್ಣುಗಳು (ತನಗೆ) ಅಂಗರಕ್ಷಕರು, (ಅವನ) ಮನಸ್ಸು (ತನಗೆ) ಆಭರಣ, (ಅವನ) ರಾಜ್ಯಶ್ರೀ (ತನಗೆ) ಸಹಚರಿ ಎನ್ನುವಂತೆ ಚಂದ್ರಮತಿಗೆ ಅರಸಿತನವು ಸಂದಿತು.

೩. ಭೂವರತಿಲಕ—ರಾಜಶ್ರೇಷ್ಠ. ಅನುರೂಪವಾದ—ಅವನ ತೇಜೋರೂಪಕ್ಕೆ ತಕ್ಕಂತಹ. ಸಹಚರಿ—ಒಡನಾಡಿ. ಸಂದಿತು—ಒಪ್ಪಿತು.

೪. ಅಷ್ಟರಮಟ್ಟಿಗೆ ಎಸೆಯುವ ಚಂದ್ರಮತಿಗೂ ಜನಪತಿ (ಯಾದ ಯಶೌಘನಿ)ಗೂ ಯಶೋಧರನೆಂಬವನು (ಮಗನಾಗಿ) ಹುಟ್ಟಿದನು: (ಹೇಗೆಂದರೆ) ಕಬ್ಬಿನ ಬಿಲ್ಲಿಗೂ ನನೆಯ ನಾರಿಗೂ ಜನಮೋಹನವಾದ ಬಾಣವು ಹುಟ್ಟಿದ ಹಾಗೆ.

೫. (ಯಶೋಧರನೆಂಬ) ಕುಮಾರ ವಿದ್ಯಾಧರನ ರೂಪು ನಾಡಾಡಿಯೆ? (ಅದು) ನೋಡುವ ಕಣ್ಣುಗಳ ಸಿರಿ, ಮಾತಾಡುವ ಬಾಯಿಗಳ ರಸಾಯನ, ಸಂತೋಷದಿಂದ ಕೂಡುವ ತೋಳುಗಳ ಪುಣ್ಯ.

೬. ಯಶೋಧರ ಕುಮಾರನನ್ನು ಕಂಡೊಡನೆಯೆ—"ಎಳೆಯ ಬೆಳುದಿಂಗಳು, ನನೆಯ ಕಣೆ, ಮಲಯಾನಿಲ (ಎಂಬ) ಈ ಮೂವರಲ್ಲಿ (ಇದು) ಯಾರೋ! (ಎಂದು ನನಗೆ) ಕುತೂಹಲವಾಗುತ್ತದೆ" ಎನ್ನದ ಕಣ್ಣುಗಳು (ಲೋಕದಲ್ಲಿ) ಉಂಟೆ!

೪. ನನೆ—ಮೊಗ್ಗು. ನಾರಿ—ಬಿಲ್ಲಿನ ಹಗ್ಗ. ಬಾಣ—ಹೂವಿನ ಬಾಣ. ೫. ನಾಡಾಡಿ—ಸಾಮಾನ್ಯ. ೬. ನನೆಯ ಕಣೆ—ಮೊಗ್ಗಿನ ಬಾಣ. ಮಲಯಾನಿಲ—ಮಲಯ ಪರ್ವತದಿಂದ ಬಂದ ಗಂಧದ ಗಾಳಿ.

೭. ಅಮೃತಮತಿ ಅವಳೇ ಯಶೋಧರನ ಮನಃಪ್ರಿಯೆ. ಆಕೆ ದೀವ ಆಗಲು, ಪುಳಿಂದನಾದ ಸುಮನೋಬಾಣನು ಆ ಭೂರಮಣನನ್ನು (ತಾನು) ಒಲಿದಂತೆ ಗೋರಿಗೊಳಿಸುತ್ತಿರುವನು.

೭. ದೀವ—ಬೇಟೆಯನ್ನು ಆಕರ್ಷಿಸುವುದಕ್ಕಾಗಿ ಪಳಗಿಸಿದ ಪ್ರಾಣಿ (Decoy.) ಪುಳಿಂದ—ಬೇಡ. ಸುಮನೋಬಾಣ—ಪುಷ್ಪಬಾಣ, ಮನ್ಮಥ. ಒಲಿದಂತೆ—ಇಷ್ಟ ಬಂದಹಾಗೆ. ಗೋರಿಗೊಳಿಸು—ವಶಪಡಿಸಿಕೊ.

೮. "ನರೆ ಎಂಬ ಹೊರಸು ಮುಖ ಎಂಬ ಅರಮನೆಯನ್ನು ಹೊಕ್ಕರೆ, ಅಂಗನಾಲೋಕನ ಎಂಬ ಅರಸು (ಆ ಅರಮನೆಯಲ್ಲಿ) ಹೇಗೆ ಇರುತ್ತಾನೆ?" ಎಂದು ಆ ನರನಾಥನು (ಯಶೌಘನು) ಅಖಿಲ ವಿಷಯವೆಂಬ ಆಮಿಷವನ್ನು ತೊರೆದನು.

೯. (ಯಶೌಘನೆಂಬ) ಇಳೇಶನು ಧರಣಿಯ ಭಾರ(ವನ್ನು ವಹಿಸುವುದ)ಕ್ಕೆ ಯಶೋಧರನನ್ನು ಒಡಂಬಡಿಸಿ, ನೂರ್ವರು ಅರಸುಗಳ ಒಡನೆ, ಕಂಬದಿಂದ ತಪ್ಪಿದ ಕರಿಯ ಹಾಗೆ, ಆದರದಿಂದ ತಪೋವನಕ್ಕೆ ನಡೆದನು.

೮. ನರೆ—ಬಿಳಿಯ ಕೂದಲು. ಹೊರಸು—ಮುಂದಾಗುವ ಕೇಡನ್ನು ಸೂಚಿಸುವ ಅಪಶಕುನದ ಹಕ್ಕಿ. ಅಂಗನಾಲೋಕನ—ಸ್ತ್ರೀಯರನ್ನು ನೋಡುವಿಕೆ. ವಿಷಯ—ಇಂದ್ರಿಯಗಳಿಗೆ ಬೇಕಾಗುವ ವಸ್ತು. ಆಮಿಷ—ಭೋಗ. ೯. ಇಳೇಶ—ಭೂಪತಿ. ಧರಣಿ—ಭೂಮಿ. ಕಂಬ—ಆನೆಯನ್ನು ಹಿಡಿದು ಕಟ್ಟುವ ಗೂಟ. ಕರಿ—ಆನೆ.

೧೦. ಆ ನೃಪಕುಲಶೇಖರನು, (ಯಶೋಧರನು), ಸಕಲ ಧರಣಿಯು ಮೃಗಮದತಿಲಕದ ಹಾಗೆ (ತನ್ನ) ಭುಜದಲ್ಲಿ ಆಳವಡಲು,

(ಅದೆ) ಯೌವನ(ಕ್ಕೆ ತಕ್ಕ) ಭೂಷಾವಳಿ ಎಂಬ ಹಾಗೆ ಅಮೃತಮತಿಯ ಮುಖವೆಂಬ ದರ್ಪಣದಲ್ಲಿ ಶಿದ್ದುವನು.

೧೦. ಮೃಗಮದ—ಕಸ್ತೂರಿ. ಅಳವಡು—ಹೊಂದಿಕೊ. ದರ್ಪಣ—ಕನ್ನಡಿ.

೧೧. ಅರಸಾ (ಹೇ ಮಾರಿದತ್ತಾ), ಒಮ್ಮೆ ಅರಸನು ಸಭಾ ಮಣಿಭವನದಿಂದ, ಅಂಬರದಲ್ಲಿರುವ ತರಂಗಿಣಿಯ ಪುಳಿನವನ್ನು ಏರುವ ಹಂಸನ ಹಾಗೆ ಶಯ್ಯೆಯ ಧವಳಪ್ರಾಸಾದತಳವನ್ನು ಏರಿದನು.

೧೧.* ಆ ಚಂದ್ರಮತಿಯ ಮಗನು ಅಮೃತಮತಿ ಸಹಿತನಾಗಿ ಹಾಗೆ ಮೆರೆಯುವ ಧವಳಾಗಾರದಲ್ಲಿ, ಅಭ್ರಮುವಿನೊಡನೆ ಅಭ್ರ ಗಜವು ವಿಭ್ರಮದಿಂದ ಸೆಜ್ಜರಕ್ಕೆ ಬಂದ ಹಾಗೆ ಎಸೆಯುತ್ತಿದ್ದನು.

೧೧. ಮಣಿಭವನ—ರತ್ನದ ಮನೆ. ಅಂಬರ—ಆಕಾಶ. ತರಂಗಿಣಿ—ಅಲೆಗಳುಳ್ಳ ನದಿ. ಪುಳಿನ—ಮರಳು. ಧವಳ—ಬಿಳುಪು. ತಳ—ಸ್ಥಳ. ೧೧*. ಧವಳಾಗಾರ—ಬಿಳಿಯ ಮನೆ. ಅಭ್ರಮು—ಐರಾವತದ ಹೆಂಡತಿ. ಅಭ್ರಗಜ—ಆಕಾಶದ ಆನೆ, ಐರಾವತ. ಸೆಜ್ಜರ—ಶಯ್ಯಾಗಾರ, ಮಲಗುವ ಮನೆ. ಎಸೆ—ಕಂಗೊಳಿಸು.

೧೨. ಹೃದಯಪ್ರಿಯರಾದವರು (ಆ ಯಶೋಧರ ಅಮೃತಮತಿಯರು) ಹಾಗೆ ಒರಗಿದ ಸಂದರ್ಭದಲ್ಲಿ, ಗರಟಿಗೆಯ ಯಾಮದ ಉಕ್ಕಡದ ಉಲಿ ಮುಗ್ಗಿದ ಹೊತ್ತಿನ ಸರದಿಗೆ, ಕರುಮಾಡದ ಪಕ್ಕದಲ್ಲಿದ್ದ ಪಟ್ಟದ ಆನೆಯ ಬದಗನು

೧೩. ವಿನೋದಕ್ಕೆ ಹಾಡುತ್ತಿರಲು; (ಅವನ) ನುಣುಪಾದ ದನಿ (ತನ್ನ) ನಿದ್ರೆಗೆ ಕತಕಬೀಜವಾಯಿತು ಎಂಬ ಹಾಗೆ, ಮೃಗಲೋಚನೆ (ಯಾದ ಅಮೃತಮತಿ) ತಿಳಿದು, ಆಲಿಸಿ, (ಅವನ ಗಾನ) ಮುಟ್ಟಿದ (ತನ್ನ) ಮನಸ್ಸನ್ನು (ಅವನಿಗೆ) ತೊಟ್ಟನೆ ಪಸಾಯದಾನ ಕೊಟ್ಟಳು.

೧೪. ಆ ದಂತಿಪನು ಹಾಗೆ ಎಸೆವಂತೆ ಹಾಡುತ್ತಿರಲು, ಅತಿ ನೂತನವಾದ ಗೀತದಲ್ಲಿ ಪಾತನವಾಗಿ ವಿಕಲವಾದ ಸ್ವಾಂತವುಳ್ಳವಳಿಗೆ (ಆ ಅಮೃತಮತಿಗೆ) ಅಂದು ಬೆಳಗಾಗುವುದರೊಳಗೆ (ಅವನನ್ನು) ನೋಡುವ ಕೂಡುವ ಚಿಂತೆ ಕಡಲಿನಂತೆ ಹರಿಯಿತು.

೧೨. ಒರಗು—ವೈಮರೆತು ಮಲಗು. ಗರಟಿಗೆ—ಕಾವಲುಗಾರನ ಗಸ್ತು. (Patrol.) ಉಲಿ—ಕೂಗು. ಮುಗ್ಗು—ಅಡಗು. ಕರುಮಾಡ—ಉಪ್ಪರಿಗೆ. ಬದಗ—ಕ್ಷುದ್ರ ಸೇವಕ. ೧೩. ಕತಕಬೀಜ—ಕದಡಿದ ನೀರನ್ನು ತಿಳಿಯಾಗಿ

ಮಾಡುವ ಒಂದು ತೆರದ ಬೀಜ. ಮೃಗಲೋಚನೆ—ಜಿಂಕೆಯಂತೆ ಕಣ್ಣುಳ್ಳವಳು. ಪಸಾಯದಾನ—ಪ್ರಸನ್ನವಾಗಿ ಕೊಟ್ಟದ್ದು, ಬಹುಮಾನ. ೧೪. ದಂತಿಪ—ಆನೆಯ ಪಾಲಕ. ಪಾತನ—ಹೋಗಿಬಿದ್ದ. ವಿಕಲ—ಕಳೆ ಕುಂದಿದ. ಸ್ವಾಂತ—ಚಿತ್ತ.

೧೫. (ಆಗ ತನಗೆ) ಮನದನ್ನಳಾದ ಗೆಳತಿಗೆ (ತನ್ನ) ಮನಸ್ಸನ್ನು ಮುಂದಿಟ್ಟು, ಬಳಿಕ (ಅವಳನ್ನು ಅವನೆಡೆಗೆ) ಕಳಿಸಿದರೆ, ಅವಳು ಆತನ ರೂಪನ್ನು ಕಂಡು, ಕಣ್ಣಿಗೂ ಮನಸ್ಸಿಗೂ ಉದ್ಗಾರವನ್ನು ಪಡೆದು, ಭೋಂಕನೆ ಮಗುಳಿದಳು.

೧೫. ಮನದನ್ನಳು—ಮನಸ್ಸಿನಂತಹವಳು, ಆಪ್ತಳು. ಉದ್ಗಾರ—ಅಸಹ್ಯ, ಹೊಟ್ಟೆ ತೊಳಸಿಕೊಂಡು ಬಾಯಿಗೆ ಬಂದಹಾಗೆ. ಭೋಂಕನೆ—ತಟಕ್ಕನೆ. ಮಗುಳು—ಹಿಂದಿರುಗು.

೧೬. "(ಪರಮರೂಪವತಿಯಾದ) ಅಮೃತಮತಿಯೆಲ್ಲಿ? ರೂಪಾಧಮನಾದ ಅಷ್ಟಾವಕ್ರ ಎಲ್ಲಿ? 'ಚಿತ್ರಂ ಅಪಾತ್ರೇ ರಮತೇ ನಾರೀ' ಎಂಬುದು ಸಮನಿಸಿತು. ಬೆಂದ ವಿಧಿಗೆ ಕಣ್ಣಿಲ್ಲ, ಇದು ನಿಜ."

೧೭. ಎನ್ನುತ್ತಾ ಬಂದು, ವಿಷಣ್ಣವಾದ ಆನನವುಳ್ಳವಳನ್ನು, ಮಾರ್ಗದಲ್ಲಿ ಅವಲಗ್ನವಾದ ನೇತ್ರವುಳ್ಳವಳನ್ನು, ಉಚ್ಛ್ವಾಸದಿಂದ ನಿತಪ್ತವಾದ ಅಧರದ ರುಚಿಯುಳ್ಳವಳನ್ನು, (ಇಂತಹ ಆ) ಮನುಜೇಂದ್ರನ ಅಂಗನೆಯನ್ನು ಎಯ್ದಿ, ಕಂಡು, ಇಂತೆಂದಳು:

೧೮. "ಕಂತುವಿನ ಕೈಯ ಕೂರಸಿಯ ಹಾಗೆ ಗರಗರಿಕೆ ಪಡೆದು ಹೊಳೆಯುವ ಅಸಿಯಳೆ (ಹೇ ಅಮೃತಮತಿ!) ನೀನು ಇಂತಹ ಕಾಮದೇವನಿಗೆ ಹೇಗೆ ಹೇಗೆ ಆಯ್ದು ಅರಸಿ ಕೂರ್ತೆ ಎಂದು ನಾನು ಅರಿಯೆನು.

೧೬. ರೂಪಾಧಮ—ಅಧಮವಾದ ರೂಪುಳ್ಳವನು. ಚಿತ್ರಮಪಾತ್ರೇ ರಮತೇ ನಾರೀ—ಹೆಣ್ಣು ಅಪಾತ್ರದಲ್ಲಿ ರಮಿಸುತ್ತದೆ, ಇದು ವಿಚಿತ್ರ. ಅಪಾತ್ರ—ಅಯುಕ್ತವಾದದ್ದು. ಬೆಂದ—ಹಾಳಾದ. ಸಮನಿಸಿತು—ಉಂಟಾಯಿತು. ೧೭. ವಿಷಣ್ಣ—ವಿಷಾದದಿಂದ ಕೂಡಿದ. ಆನನ—ಮುಖ. ಅವಲಗ್ನ—ಸಿಕ್ಕಿಕೊಂಡ. ನೇತ್ರ—ಕಣ್ಣು. ನಿತಪ್ತ—ಬೆಂದುಹೋದ. ಅಧರ—ಕೆಳತುಟಿ. ರುಚಿ—ಕಾಂತಿ. ಅಂಗನೆ—ಸ್ತ್ರೀ. ಎಯ್ದಿ—ಸಮೀಪಿಸಿ. ೧೮. ಕಂತು—ಮನ್ಮಥ. ಕೂರಸಿ—ಹರಿತವಾದ ಕತ್ತಿ. ಗರಗರಿಕೆ—ಮೆರುಗು. ಅಸಿಯಳು—ಕೃಶವಾದ ದೇಹವುಳ್ಳವಳು. ಕೂರ್—ಪ್ರೀತಿಸು.

೧೯. "ಈ ರೀತಿಯವನು ಎಂದು ತೋರುವುದಕ್ಕೆ ಮೇದಿನಿಯೊಳಗೆ ಆತ(ನೊಬ್ಬ)ನಲ್ಲದೆ (ಬೇರೆ ಯಾರೂ) ಇಲ್ಲ" ಎನ್ನಲು; (ಅಮೃತಮತಿ) "ಹೇಳು, ಹೇಳು. (ನನ್ನ) ಕಾದಲನು ಹಾಗಾದರೆ (ಅಷ್ಟೊಂದು) ಚೆಲುವನೆ! ದೂತಿ, (ಬೇಗನೆ ಹೇಳದೆ) ನೀನು ನನ್ನನ್ನು ಕೊಂದೆ" ಎಂದರೆ; (ಅವಳು) ಹೇಳಿದಳು:

೨೦. "ಹರಿದ ತಲೆ, ಗುಳಿ (ಬಿದ್ದ) ನೊಸಲು, ಕೆಟ್ಟ ಕಣ್ಣು, ನೊರೆ ಬಾಯಿ, ಹಪ್ಪಳ(ದಂತೆ ಚಪ್ಪಟೆಯಾದ) ಮೂಗು, ಮುದುರಿಕೊಂಡ ಕಿವಿ, ಉಬ್ಬುಹಲ್ಲು, ಕುಸಿದ ಕೊರಳು, ಇಳಿದ ಎದೆ, ಹೊರಟ ಬೆನ್ನು, ಬಾತುಕೊಂಡ ಬಸಿರು, ಅಡಗಿದ ಜಘನ.

೨೧. "ಆತನ ಕೈಗಳು, ಕರೆಯಿರುವ ತೊಗಲಿನ ಹಳೆಯ ಕುಳಿಯನ್ನು ತೆರೆದ ರೀತಿಯು ಮೈಯ ನಾತ. ಕಿರುಗಣ್ಣು, ಗೂನುಬೆನ್ನು. ಕಾಲು, ಟೊಂಕ ಮುರಿದ ಕತ್ತೆಯ ಕಾಲನ್ನು, ಮರೆಯಿಸುವುದು.

೨೨. "ಮುದಿಯಾದ ಕರಡಿಯ ಮುದಿ ತೊಗಲಿನ ಹಾಗಿರುವ ಕರಿಯ (ಅವನು.) ತಾಳಕಾಯಿಯ ಹೊರೆಯೊಂದರ ಹಾಗಿರುವ ಮುರುಡ. ಅಷ್ಟಾವಕ್ರ. ಮೊದಲೇ ಒಣಗಿದ ಗೂನವಾದ ಕೊರಡಿನ ಹಾಗಿರುವ ಕೊಂಕ."

೧೯. ಮೇದಿನಿ—ಭೂಮಿ. ಕಾದಲ—ಪ್ರಿಯ. ೨೦. ನೊಸಲು—ಹಣೆ. ಜಘನ—ಸೊಂಟದ ಕೆಳಭಾಗ (Loins) ೨೧. ಕರೆ—ಕಪ್ಪು. ಕುಳಿ—ನೀರು ನಿಂತ ಹಳ್ಳ. ನಾತ—ಕೆಟ್ಟ ವಾಸನೆ. ೨೨. ಮುರುಡ—ಮುದರಿಕೊಂಡು ಹೋಗಿರುವವನು. ಕೊಂಕ—ವಕ್ರ.

೨೩. (ದೂತಿಯು ಹೀಗೆ) ಹೇಳಿದರೆ, ದೂತಿಗೆ ಅವಳು ಹೀಗೆ ಹೇಳಿದಳು: (ಆಗ ಅವಳಿಗೆ) ಕೊರಳಲ್ಲಿ ಗದ್ಗದಿಕೆ, ಈಕ್ಷಣದಲ್ಲಿ ನೀರು ಹನಿ, ಎದೆಯಲ್ಲಿ ಮಿಡುಕು ಉಂಟಾಗಲು, ಬೇಟೆಗಾರನ ಬಾಣವು ಗಟ್ಟನಿಂತ ಕಾಡಿನ ಹೆಣ್ಣುಜಿಂಕೆಯ ಹಾಗೆ (ಆಗಿ, ಅವಳು ಹೇಳಿದಳು:)

೨೪. "ಕಪ್ಪಾದರೆ ಕಸ್ತೂರಿಯನ್ನು, ಮುರುಟಿಕೊಂಡುದಾದರೆ ಮಲಯಜವನ್ನು, ಬಾಗಿದ್ದರೆ ಏನು ಕಾಮನಬಿಲ್ಲನ್ನು, (ಯಾರಾದರೂ) ಹೀಯಾಳಿಸುವರೇ, ಮರುಳೆ? ನಲ್ಲರ ಮೈಯಲ್ಲಿ (ಪೊಲ್ಲಮೆಯಿದ್ದರೂ ಆ) ಪೊಲ್ಲಮೆಯೇ ಲೇಸು.

೨೫. "ಒಲವು ಉಂಟಾದರೆ, ರೂಪಿನ ಕೋಟಲೆ ಏನು ಮಾಡುತ್ತದೆ? ಕಾರ್ಯವು ಆಗಲು, ಕಾರಣದಿಂದ ಫಲವೇನು? ಇಂದು ನನಗೆ ಆತನೆ ಕುಲದೈವ, ಕಾಮದೇವ, ಇಂದ್ರ, ಚಂದ್ರ."

೨೩. ಈಕ್ಷಣ—ನೋಟ. ಮಿಡುಕು—ನಡುಕ. ೨೪. ಮುರುಟಿಕೊ—ಮುದುರಿಕೊ, ಗಂಟುಗಂಟಾಗು. ನಲ್ಲರು—ಪ್ರಿಯರಾದವರು. ಪೊಲ್ಲಮೆ—ಕೆಟ್ಟದ್ದು. ಲೇಸು—ಮೇಲು. ೨೫. ಒಲವು—ಪ್ರೀತಿ.

೨೬. ಎಂದು ಆಕೆಗೆ (ಆ ದೂತಿಗೆ) ಲಂಚವನ್ನು ಇತ್ತು, ಎಂದುದನ್ನು ಎಂದು, ಬೇಡಿಕೊಂಡು ಕಳುಹಿಸಲಾಗಿ, ಆವಳು (ಆ ದೂತಿ) (ಅಷ್ಟಾವಕ್ರನನ್ನೂ ಅಮೃತಮತಿಯನ್ನೂ) ಕೂಡಿಸಿದರೆ, ಅಮೃತಮತಿ ಆತನಲ್ಲಿಯೇ ರಾತ್ರಿಯೂ ಹಗಲೂ (ತನಗೆ) ಬಿಡುವಾದ ಹೊತ್ತುಗಳನ್ನು ಸಲ್ಲಿಸಿದಳು.

೨೭. ಆ ವಿಕಟವಾದ ಅಂಗವುಳ್ಳವನಲ್ಲಿ ಹಾಗೆ ಆ ದೇವಿಗೆ ರತಿಫಲವನ್ನು ಆಸ್ವಾದನಮಾಡುವುದರಲ್ಲಿ ರುಚಿಯಾಗಲು, ಬೇವನ್ನು ಮೆಚ್ಚಿದ ಕಾಗೆಗೆ ಮಾವು ಕೀಳಾಗುವಂತೆ, (ತನ್ನ) ಪತಿಯಲ್ಲಿ ಮನಸ್ಸು ಇಳಿದಾಯಿತು.

೨೬. ಲಂಚ—ಗುಟ್ಟಾಗಿ ಕೆಲಸ ಆಗಬೇಕಾದರೆ ಕೊಡುವ ಸಂಭಾವನೆ. ೨೭. ವಿಕಟ—ವಿಕಾರ. ಅಂಗ—ದೇಹದ ಭಾಗ. ಆಸ್ವಾದನ—ರುಚಿ ನೋಡುವುದು. ಇಳಿದಾಗು—ಬೆಲೆಯಿಲ್ಲದೆ ಹೋಗು.

೨೮. ನೋಡುವ, ಮಾತಾಡುವ, ಬಾಯಿಗೆ ಊಡುವ ಸಂದರ್ಭದಲ್ಲಿ ಅಮೃತಮತಿಗೆ ಹಿಂದಿನ ಸ್ಥಿತಿಯಿಂದ ಪಾಡು ಅಳಿಯುತ್ತಿರಲು, (ಇದಕ್ಕೆ ಕಾರಣವೇನೋ) ನೋಡಬೇಕೆಂದು ಯಶೋಧರನು ಒಮ್ಮೆ ಶಯ್ಯಾತಲದಲ್ಲಿ

೨೯. (ಮೈ) ಮರೆತು ಒರಗಿದವನ ಹಾಗೆ ಇರಲು, ದುಂಬಿಯು ಹಗಲು ಮುಗಿಯುವವರೆಗೂ ಸಿಕ್ಕಿಕೊಂಡಿದ್ದು, ರಾತ್ರೆ ನೈದಿಲೆಯಿಂದ ಹೊರಗೆ ಹೊರಡುವ ಹಾಗೆ, ಅರಸನ ತೋಳ ಸೆರೆಯಿಂದ ನುಸುಳಿ, ಅರಸಿಯು ಜಾರನ ಬಳಿಗೆ ಹೋದಳು.

೨೮. ಪಾಡು ಅಳಿ—ಸ್ಥಿತಿ ಕೆಡು. ಶಯ್ಯಾತಲ—ಮಲಗುವ ಸ್ಥಳ; ಹಾಸಿಗೆ, ಮಂಚ. ೨೯. ಜಾರ—ಪರಸ್ತ್ರೀಯನ್ನು ಬಯಸುವವನು.

೩೦. (ಇತ್ತ) ಉರ್ಚಿದ ಬಾಳಿನೊಡನೆ ಪ್ರಚ್ಛನ್ನದಿಂದ, ದೋಷದ ಬೆನ್ನಿನಲ್ಲಿ ಸಂಧಿಸುವ ದಂಡದ ಹಾಗೆ, ಅರಸನು (ಅವಳ) ಬೆನ್ನಲ್ಲಿಯೆ ಹೋದನು. ಅಷ್ಟರಲ್ಲಿ ಆ ಬದಗನು ಅರಸಿಯು ತಡೆದರೆ ಮುನಿದನು.

೩೧. ಮುನಿದು, ಆಕೆ ತಂದ ಮಾಲಾ ಮಲಯಜ ತಾಂಬೂಲ ಜಾಲವನ್ನು ಕೆದರಿ, ಕುರುಳುಗಳನ್ನು ಎಳೆದು, ಕಲಹಂಸೆಗೆ ಗಿಡಿಗನು ಎರಗಿದ ಹಾಗೆ (ಎರಗಿದ) ಮಿಣಿಯಿಂದ (ಅವಳ) ಬೆನ್ನನ್ನು ಬಡಿದನು.

೩೦. ಉರ್ಚು—ಒರೆಯಿಂದ ಎಳೆ. ಬಾಳ್—ಕತ್ತಿ. ಪ್ರಚ್ಛನ್ನದಿಂದ—ಮರೆಯಾಗಿ, ಕಾಣದಂತೆ. ಸಂಧಿಸು—ಸೇರು. ಬದಗ—ಕ್ಷುದ್ರನಾದ ಆಳು. ೩೧. ಮಲಯಜ—ಚಂದನ. ಕುರುಳು—ತಲೆಯ ಕೂದಲು. ಕಲಹಂಸ—ಇಂಪಾಗಿ ಕೂಗುವ ಹಂಸ. ಎರಗು—ಮೇಲೆ ಬೀಳು. ಮಿಣಿ—ಚರ್ಮದ ಹಗ್ಗ, ಬಾರು.

೩೨. (ಬಳಿಕ ಅವಳ) ತೋರವಾದ ಮುಡಿಯನ್ನು ಹಿಡಿದು, ಕುಡಿಯನು ನಾರನ್ನು ತದೆಯುವಂತೆ ತದೆದು, ಬೀಟೆಯ ಕಾಲಿನಿಂದ (ಅವಳ ಮೈಯ) ಬಾರು ಏಳುವಂತೆ (ಆ) ಬದಗನು ಒದೆದರೆ, (ಅಮೃತಮತಿ) ಕೇರೆ(ಯ ಹಾವು) ಹೊರಳುವ ಹಾಗೆ (ಅವನ) ಕಾಲಿನ ಮೇಲೆ ಹೊರಳಿದಳು.

೩೩. "ನಲ್ಲನೆ, ತಡವಾದುದು ಉಂಟು. (ಬಡಿದರೂ) ಬಡಿ. (ಆದರೆ ಮಾತ್ರ) ಮುನಿಯದಿರು. ಅರಸನೆಂಬ ಪಾತಕನು ನನ್ನನ್ನು (ತನ್ನ) ತೊಡೆಯ ಮೇಲೆ ಏರಿಸಿ ಕೇಳಿಕೆಯಾದರೆ, (ಬೇರೇನೂ ಮಾಡಲಾರದೆ) ನೋಡುತ್ತಿದ್ದೆನು. ಸುಮ್ಮನೆ (ಹಾಗೆಲ್ಲಾ) ನಿಲ್ಲಲು ನಾನು ಸಾಹಸಮಾಡುವೆನೇ?

೩೪. "(ನಿನ್ನ) ಧ್ವನಿ (ನನ್ನ) ಕಿವಿಗೆ ಸವಿ. (ನಿನ್ನ) ರೂಪು (ನನ್ನ) ಕಣ್ಣಿಗೆ ಸವಿ. ಅವಧರಿಸು, ಎಲೆ ಗಜವೆಡಂಗ. ನೀನು (ನನ್ನನ್ನು) ಉಳಿದರೆ, (ನಾನು) ಸಾಯುವವಳು. ನನಗೆ (ನೀನಲ್ಲದೆ) ಮಿಕ್ಕ ಗಂಡಸರು ಸಮಾನರಾದ ಸೋದರರು" ಎಂದು (ಅವನಿಗೆ) ನಂಬಿಕೆಯನ್ನು ತಿಳಿಸಿದಳು.

೩೨. ತೋರ—ದಪ್ಪ, ದಟ್ಟ. ಮುಡಿ—ತುರುಬು. ಕುಡಿಯ—ಒಕ್ಕಲಿಗ. ತದೆ—ಚಚ್ಚು. ಬೀಟೆ—ಬಿರಿದು ಒಡೆದ. ಬಾರು—ಚರ್ಮ. ಏಳು—ಸುಲಿ.

3

೩೩. ಕೇಳಿಕೆ—ವಿನೋದ, ಕ್ರೀಡೆ. ೩೪. ಅವಧರಿಸು—ಗಮನಿಸು, ಲಾಲಿಸು. ಗಜವೆಡಂಗ—ಆನೆಯನ್ನು ಪಾಲಿಸುವ ಬೆಡಗುಳ್ಳವನು. ಉಳಿ—ಬಿಡು.

೩೫. ಆಗ (ಯಶೋಧರನ) ಕತ್ತಿ ನಿಮಿರಿತು, ತೋಳು ತೂಗಿತು, ಇಬ್ಬರನ್ನೂ ಎರಡುಭಾಗ ಮಾಡಲು ಮನಸ್ಸು ಕನಲಿತು; ಆಗ ಧೃತಿ ಬಂದು, ಬೇಡ ಬಿಡು ಎಂದ ಹಾಗೆ, ಅರಸನು (ಅವರನ್ನು ಕತ್ತರಿಸಲು) ಹೇಸಿದನು.

೩೫. ನಿಮಿರು—ಮೇಲೆ ಏಳು. ತೂಗು—ಬೀಸಲು ಸಿದ್ಧವಾಗು. ಕನಲು—ಕೋಪಿಸಿಕೊ. ಧೃತಿ—ಧೈರ್ಯ.

೩೬. "ನನ್ನ ಭುಜದ ಈ ಅಸಿ, ಪರನೃಪರನ್ನು ಅಲ್ಲದೆ, ಈ ಹುಳುಕರನ್ನು ಇರಿಯುವುದೆ? ಕೈಯಿಕ್ಕಲು ಆನೆ ಆನೆಗಲ್ಲದೆ ಇರುವೆಗೆ ಹರಿಯುವುದೆ? ಸಿಂಹವು ಆನೆಯನ್ನಲ್ಲದೆ ನರಿಯನ್ನು ಇರಿಯುವುದೆ?

೩೭. "(ಈ) ಅಸಿಯೆಂಬ ಲತೆಯು, ರಣದಲ್ಲಿ ಧೌತವಾದದ್ದು, ಈ ಮಸಿಯ ಮುಸುಡಿಯಿರುವವನ ಜೀವದ ಕಪ್ಪಿನಿಂದ ಕಂದಿದರೆ—ಎಂಟು ದೆಸೆಯನ್ನು ಅಡರಿದ ನನ್ನ ಕೀರ್ತಿಪ್ರಸರದ ಕುಡಿ ಕಹಿಸೋರೆಯ ಕುಡಿಯಹಾಗಾಗುತ್ತದೆ.

೩೮. "ಅಳಿಪು ಇದ್ದರೆ ನೋಡು. ಇರಿದ ಒಡನೆ (ಆ ಅಳಿಪು) ಅಳಿಯುವುದೇನು? ಹೆಣ್ಣು ತಪ್ಪಿ ನಡೆದರೆ, 'ಛಿಃ ಕಿಸುಗುಳ' ಎಂದು (ಅವಳನ್ನು) ಉಳಿಯುವುದೆ ಗೆಲ್ಲ. (ಹಾಗಲ್ಲದೆ ಅವಳನ್ನು ಕೊಂದು) ಆ ಹುಳು ಹುಟ್ಟುವ ನರಕದಲ್ಲಿ ಚದುರನಾದವನು ಬೀಳುವನೆ?"

೩೬. ಅಸಿ—ಕತ್ತಿ. ೩೭. ಧೌತ—ಸ್ನಾನ ಮಾಡಿದ್ದು. ಮುಸುಡಿ—ಮುಖ. ದೆಸೆ—ದಿಕ್ಕು. ಅಡರು—ಏರು, ಹತ್ತು, ಹಬ್ಬು. ಕುಡಿ—ಬೆಳೆಯುವ ಬಳ್ಳಿಯ ತುದಿ. ೩೮. ಅಳಿಪು—ಆಸೆ. ಕಿಸುಗುಳ—ಕ್ಷುದ್ರವಾದ ಕುಳ, ಗೌರವ ವಿಲ್ಲದವರು. ಉಳಿ—ಬಿಡು. ಗೆಲ್ಲ—ಜಯ.

೩೯. ಎಂಬುದಾಗಿ ನೆನೆದು, ಇರಿಯಲು ಒಲ್ಲದೆ, ಅರಸನು (ಅರಮನೆಗೆ ಹಿಂದಿರುಗಿ) ಬಂದು, ಮೊದಲಿನ ಹಾಗೆ ಪವಡಿಸಲು; (ಅರಸಿ) ತಾನೂ ಬಂದು, 'ಅರಸನು (ನ್ನೈ) ಮರೆತು ಒರಗಿದನು' ಎಂದು, ಒಯ್ಯನೆ ಹತ್ತಿರ ಬಂದು, (ಅರಸನ) ಹಿಂದುಗಡೆ ಮಲಗಿರುವಾಗ—

೪೦. (ಆ) ಪತಿಗೆ ಶಯ್ಯಾತಳದಲ್ಲಿ, ಬದಗುಳಿಗನ ತೋಳು ಮುಟ್ಟಿದ ಸುದತಿಯಲ್ಲಿ ಇಂಪಾಗದ ಹಾಗೆ, (ಮನಸ್ಸು) ಕೆಟ್ಟಿತು. (ಹೇಗೆಂದರೆ)—ಹುಳಿ ಮುಟ್ಟಿದ ಹಾಲಿನ ಹಾಗೆ, ನೀರು ಮುಟ್ಟಿದ ಜೇನುತುಪ್ಪದ ಹಾಗೆ.

೩೯. ಪವಡಿಸು—ಮಲಗು. ಒಯ್ಯನೆ—ಮೆಲ್ಲನೆ. ೪೦. ಬದಗುಳಿಗ—ಬದಗ. ಸುದತಿ—ಸ್ತ್ರೀ.

೪೧. (ಆಗ, ಇದುವರೆಗಿನ ಕಥೆಯನ್ನು ಕೇಳುತ್ತಿದ್ದ ಮಾರಿದತ್ತನು) “ಆ ಗಂಡನನ್ನು ಅಪ್ಪಿದ ತೋಳು ಪೋಗಂಡನನ್ನು ಅಪ್ಪುವಂತೆ ಮಾಡಿದ ವಿಧಿಯನ್ನು (ಎಲ್ಲಿಯಾದರೂ) ಕಂಡೆನಾದರೆ, ಆ (ವಿಧಿಯ) ಮೂಗನ್ನು ಕೊಯ್ದು ಇಟ್ಟಿಗೆಯಲ್ಲಿ, ಹೋಗು, ಒರೆಸದೆ ಬಿಡುವೆನೇನು!”

೪೨. ಎನ್ನಲು; (ಅದನ್ನು) ಕೇಳಿ, ಮಾರಿದತ್ತನೆಂಬ ಅವನಿಪನ ವನಿಗೆ ಅಭಯರುಚಿ ಬಳಿಕ ಇಂತೆಂದನು: ‘ಮನಸಿಜನ ಮಾಯೆ ವಿಧಿ ವಿಲಸನದ ನೆರವನ್ನು ಪಡೆದರೆ, ನರರನ್ನು ಕೊಂದು, (‘ಕೊಂದೆ!’ ಎಂದು) ಕೂಗದೆ (ಬಿಡುತ್ತದೆಯೆ)!’

೪೩. ಪದವಿಯ ರೂಪಿನ ಸೊಬಗಿನ ಮದವನ್ನು ಮಾಡುವವರ ಮೂಗಿನಲ್ಲಿ, (ಅವರ ಎದುರಿಗೆ) ಅನಂಗನ ಕೃತಿಯು, ಸುದತಿಯರ ವಿಕಾರವೆಂಬ ವಿದ್ಯಾಬಲದಿಂದ, ಪಾತ್ರವನ್ನು ಆಡದೆ ಮಾಣದು.

೪೧. ಪೋಗಂಡ—ವಿಕಲಾಂಗ, ಅಂಗಹೀನ. ೪೨. ಮನಸಿಜ—ಮನ್ಮಥ. ಮಾಯೆ—ಮಂಕು. ವಿಲಸನ—ವಿಲಾಸ. ನೆರವು—ಸಹಾಯ. ೪೩. ಪಾತ್ರವನ್ನು ಆಡು—ತನಗೆ ಬೇಕಾದ ಹಾಗೆ ಕುಣಿ. ಮಾಣು—ಬಿಡು.

೪೪. ಬಳಿಕ ಆ ರಾಜಕುಮಾರನು, “ಅಂತಹ ರೂಪಿನ ಹೆಂಗಸರೇ ಹೀಗೆ ಕಳಿಪಾದರೆ, ಛಿಃ, ಪ್ರೀತಿ ಪಡೆಯುವ ಪ್ರೀತಿಸುವ ಮಾತನ್ನು ಮಾರಿಗೆ ಕೊಡು. ಸಿರಿಯನ್ನು ಒಟ್ಟಿ ಸುಡು, ಹೋಗು” ಎಂದನು.

೪೫. “ಒಲಿಸಿದ ಹೆಣ್ಣು ಹೆರವರಲ್ಲಿ ಸಂಚಲಿಸಿದರೆ, ಇದು ಸುಖವೆ? (ಅಲ್ಲ. ಆದ್ದರಿಂದ) ಪರಮಸುಖಸಂಪದವನ್ನು ಸಲ್ಲಿಸಿ, ಸಲ್ಲುವಂತೆ ನೆರೆಯುವ ಮುಕ್ತಿಯನ್ನು ಒಲಿಸುವೆನು. ಉಳಿದ ಹೆಂಗಸರ ನಣ್ಪನ್ನು ಇನ್ನು ಒಲ್ಲೆನು.”

೪೬. ಎಂದು ಹೀಗೆ ಬಹುವಿಕಲ್ಪದ ದಂದುಗದಲ್ಲೇ ಬೆಳಗು ಮಾಡಿ, ಮೈಮುರಿದು ಎದ್ದನು. (ಆಗ) ಸುಪ್ರಭಾತದ ಆತೋದ್ಯವು ಬಂದು ತೊಡೆಯನ್ನು ಹೊಯ್ದು (ಏಳು ಎಂದು) ಬೋಧಿಸಿದ ರೀತಿಯಲ್ಲಿ ಎಸಗಿತ್ತು.

೪೪. ಕಳಿಪು—ಕಳಪೆ, ಕೆಲಸಕ್ಕೆ ಬಾರದ್ದು. ಮಾರಿಗೆ ಕೊಡು—ಸುಡು. ಒಟ್ಟೆ—ರಾಶಿಮಾಡಿ. ೪೫. ಪರಮಸುಖ—ಮುಕ್ತಿ. ನಣ್ಪು—ನಂಟು. ೪೬. ಬಹುವಿಕಲ್ಪದ—ಅನೇಕ ರೀತಿಯಾದ. ದಂದುಗ—ಚಿಂತೆ. ಸುಪ್ರಭಾತ—ಬೆಳಗು. ಆತೋದ್ಯ—ವಾದ್ಯ. ಬೋಧಿಸು—ಎಚ್ಚರಿಸು.

೪೭. ನಿತ್ಯದಾನವನ್ನು ಮಾಡಿದವನು (ಆಗಿ), ಘೃತವನ್ನು (ಕಣ್ಣು) ತುಂಬ ನೋಡಿದವನು (ಆಗಿ), ಕಪಿಲೆಯನ್ನು (ತಲೆಯಿಂದ ಬಾಲದ ವರೆಗೆ) ಸ್ಪರ್ಶಮಾಡಿದವನು (ಆಗಿ), ಕೆಲವರು ಪರಿಚಿತರಾದ ಪರಿಜನರ ಚತುರವಾದ ವಚಃಪ್ರಚಯದಲ್ಲಿ ರುಚಿಯಿದ್ದ ಅರಸಿಯನ್ನು ಅರಸನು ಒಯ್ಯನೆ ಸಾರಿದನು.

೪೭. ಘೃತ—ತುಪ್ಪ. ಕಪಿಲೆ—ಕಂದುಬಣ್ಣದ ಗೋವು. ವಚಃಪ್ರಚಯ—ಮಾತಿನ ರಾಶಿ. ರುಚಿ—ಆಸಕ್ತಿ.

೪೮. ಲಂಪಟನ ಹಾಗೆ ಏನಾದರೂ ಅಲಂಪಿನ ನಗೆನುಡಿಯ ನೆಪದಿಂದ ನೈದಿಲೆಯ ಹೂವಿನಿಂದ ಹೊಯ್ದರೆ, ಸಂಪಗೆಯ ಅಲರಿನ ಕಂಪು ಹೊಯ್ದ ದುಂಬಿಯ ತೆರದಿಂದ, ಮೂರ್ಛೆಹೋದಳು.

೪೯. (ಆಗ) ಪ್ರಕುಪಿತಚಿತ್ತದ ಭೂನಾಯಕನು "ಅಕಟಕಟ! ನೊಂದಳು! ಎತ್ತಿರೆ ಸುಕುಮಾರಿಯನ್ನು!" ಎನ್ನುತ್ತಾ ಇಷ್ಟು (ಸ್ವಲ್ಪ) ಕೊಂಕಿನಿಂದ ನುಡಿದನು. (ಅವನಿಗೆ ಕೋಪ ಬಂದುದು ಏನಾಶ್ಚರ್ಯ? ಅವಳು ಆಡಿದಂತಹ) ಅಣಕಕ್ಕೆ ಶ್ರಮಣನಾದರೂ ಸೈರಿಸುವನೇ!

೫೦. "ದೈವದಿಂದ, ಹೇಗಾದರೂ ಆಗಲಿ, ಇಂದಿನ ಸಾವು ಓಸರಿಸಿತು. ಕರ್ಣಭೂಷಾವಳಿ(ಯಾದ ನೈದಿಲೆಹೂವು) ಭೂಷಾವಳಿಯಾಗದೆ, ಸೆಳೆದರೆ ಸಾವಿನ ಬಳಿಗೆ ಕೈದುವಾಯ್ತು, ನೈದಿಲೆ ಕುಸುಮ!" (ಎಂದು ಅರಸನು ಕೊಂಕಿಂದ ನುಡಿದನು.)

೪೮. ಲಂಪಟ—ಕಾಮುಕ. ಅಲಂಪು—ಅನುರಾಗ. ಅಲರು—ಹೂವು. ಕಂಪು—ಸುವಾಸನೆ. ೪೯. ಪ್ರಕುಪಿತಚಿತ್ತ—ತುಂಬ ಕೋಪಿಸಿದ ಮನಸ್ಸುಳ್ಳ.

ಕೊಂಕು—ವಕ್ರ, ವ್ಯಂಗ್ಯ. ಅಣಕ—ಆಟ, ನಾಟಕ. ಶ್ರಮಣ—ಸಂಯಮಿಯಾದ ಜೈನ ಸನ್ಯಾಸಿ. ೫೦. ಓಸರಿಸು—ಕಳೆದುಹೋಗು, ಓರೆಯಾಗು. ಭೂಷಾವಳಿ—ಆಭರಣ. ಕೈದು—ಕೈಯ ಆಯುಧ.

೫೧. ಹೋದ ಇರುಳಿನ ಕಿತ್ತಡವನ್ನು ಹೀಗೆ ಮೂದಲೆಯಾಗಿ ನುಡಿದರೆ; (ಅರಸನು ತನ್ನ ನಡತೆಯನ್ನು) ಅರಿತುದನ್ನು ತಾನರಿತು, ಆ ಪಾದರಿಗೆ ಸತ್ತಹಾಗೆ (ಮಲಗಿ) ಇರಲು; ನೃಪೇಂದ್ರ(ನಾದ ಯಶೋಧರನು) ಬಗೆ ಕದಡಿ, ತಾಯ ಪೊರೆಗೆ ಹೋದನು.

೫೨. (ಹೋದರೆ, ಆ ತಾಯಿ) ಮಗನ ಮುಖವನ್ನು ಕುರಿತು ನೋಡುತ್ತಾ, ಅಳ್ಕರಿನ ಅಳುರ್ಕೆಯಿಂದ ಉಕ್ಕುವ ಮೊಲೆಹಾಲು ಪುಣ್ಯಸ್ನಾನದ ನೀರಾಗಲು, (ತನ್ನ) ಪದಾಬ್ಜದಿಂದ (ಅವನನ್ನು) ಮೇಲೆತ್ತಿ, ಹಲವಾದ ಆಶೀರ್ವಾದಗಳಿಂದ ಅಮರ್ದಪ್ಪಿ, ಜೋತು ಉಕ್ಕುವ (ಮಗನ) ಕುರುಳನ್ನು ತಿದ್ದುತ್ತಾ, ಅಂದಿನ (ಅವನ) ಭಂಗಿಯನ್ನು ಕುರಿತು ಇಂತೆಂದಳು: (ಅವಳು ಎಂದದ್ದು ಮೂರನೆಯ ಅವತಾರದ ಮೊದಲಲ್ಲಿ ಇದೆ.)

೫೧. ಇರುಳು—ರಾತ್ರಿ. ಕಿತ್ತಡ—ಕೆಟ್ಟ ಕೆಲಸ. ಮೂದಲೆ—ಹಂಗಿಸಿ ಹೇಳಿದ್ದು. ಪಾದರಿಗೆ—ಹಾದರ ಮಾಡಿದವಳು. ಬಗೆಕದಡಿ—ಮನಸ್ಸು ಕಲಕಿ, ಅಶಾಂತವಾಗಿ. ಪೊರೆ—ಸಮೀಪ. ೫೨. ಅಳ್ಕರು—ಅನುರಾಗ. ಅಳುರ್ಕೆ—ಆಧಿಕ್ಯ. ಪದಾಬ್ಜ—ಪಾದಕಮಲ. ಅಮರ್ದಪ್ಪು—ಗಾಢವಾಗಿ ಅಪ್ಪಿಕೊ. ಕುರುಳು—ತಲೆಗೂದಲು. ಭಂಗಿ—ರೀತಿ, ಇರವು.

[ಹೀಗೆ, ಇದುವರೆಗಿನ ಕಥೆಯನ್ನು ಅಭಯರುಚಿಯಿಂದ ಹೇಳಿಸಿದ ಮೇಲೆ, ಕವಿಯಾದ ಜನ್ನ ಹೇಳುತ್ತಾನೆ:]

೫೩. ಅಭಯರುಚಿಕುಮಾರನು ಹಿಂಸಾರಭಸಮತಿಯಾದ ಮಾರಿದತ್ತನಿಗೆ ಸಯ್ಪನ್ನು ಹೇಳಿ, ಧರ್ಮಕ್ಕೆ (ಅವನನ್ನು) ತಂದ ಈ ಶುಭಕಥನವನ್ನು ಅತಿಯಾದ ಆನಂದದಿಂದ ಕೇಳುವ ಭವ್ಯಪ್ರಭುಸಭೆಗೆ ಮಂಗಳವಾದ ಶ್ರೀವಿಲಾಸವು ಎಸೆದಿರುತ್ತದೆ.

೫೩. ಮೊದಲನೆಯ ಅವತಾರದ ಕಡೆಯ ಪದ್ಯದ ಕೆಳಗೆ ನೋಡಿ.

## ಮೂರನೆಯ ಅವತಾರ

[ತಾಯಿ ಯಶೋಧರನಿಗೆ ಹೀಗೆ ಹೇಳಿದಳೆಂದು, ಅಭಯರುಚಿ ತನ್ನ ಕಥೆಯನ್ನು ಮುಂದುವರಿಸುತ್ತಾನೆ.]

೧. ಯಶೋಧರ ನೃಪೇಂದ್ರ! ಶ್ರೀ ಎಂಬ ರಮಣಿಯು (ನಿನ್ನ) ತೋರವಾದ ಮುತ್ತಿನ ಹಾರದಲ್ಲಿ ಒಲೆದು ಉಯ್ಯಾಲೆಯಾಡುವುದಕ್ಕೆ (ನಿನ್ನ) ಪಿರಿದಾದ ಉರವು ನಿತ್ಯವಸಂತವಾಗಿರಲು, ನೀನಲ್ಲದವರು (ಶ್ರೀಯನ್ನು ಹೀಗೆ) ತಾಳಿದವರು ಯಾರೋ!

೨. "ನಿನಗೆ ಶುಭವೆಂದ ವಂದಿಯ ಮನೆಯ ಅಂಗಳದೊಳಗೆ, ಹಣ್ಣುಬಿಟ್ಟು ಹಬ್ಬಿದ ಮಂದಾರ ನಮೇರು ಪಾರಿಜಾತದ ವನದಲ್ಲಿ, ಶ್ರೀ (ತನ್ನ) ವನಕೇಳಿಗಳನ್ನು ಮೆರೆಯುವುದಲ್ಲವೆ!

೩. "ಮನುಜ ಮನೋಭವ! ನಿನ್ನ ವಿಲಾಸವೆಂಬ ವಸಂತವು, ಮನಸಿಜನ ಕಲ್ಪಲತೆಗಳ ನಂದನಗಳೋ ಎಂಬಂತೆ ಬಿಂಕಕ್ಕೆ ಕೊಂಕಿದ ಅಬಲಾಜನವನ್ನು ನನೆಕೊನೆಹೋಗಿಸುತ್ತಿರುವುದು.

೪. "ಉದಧಿಯ ಪರಿಯಂತವೂ ಇಳೆಯಲ್ಲಿ ಒದಗಿದ ನಿನ್ನ ಆಜ್ಞೆಯು ಸಕಲ ಭೂಪಾಲಕರ ಮಣಿಕಿರೀಟಗಳನ್ನು ಈಳ್ದು ಒದೆದು ಉರುಳುವಂತೆ ನೂಕಿ, (ಅವರ) ನೆತ್ತಿಯ ಮೇಲೆ ಕುಳಿತಿದೆ.

೫. "ನಿನಗೆ (ಏನೂ) ಕೊರತೆ ಇಲ್ಲ. ಅದೇಕೆ ಎಂದು (ನಾನು) ಅರಿಯೆ. ನೀರು ಓಡಿ, ನಿನ್ನ ತನುವಿನ ಬಣ್ಣವು ಬರಿದಾದ ಕೊಳದ ಹಾಗಾಯಿತು. (ಇದನ್ನು) ಈಕ್ಷಿಸಿ, ಆರಿದ ನೀರಿನ(ಲ್ಲಿರುವ) ಮೀನಿನ ಹಾಗೆ ನನ್ನ ಮನಸ್ಸು ಇಂದು ಮರುಗಿದುದು."

೧. ತೋರ—ದಪ್ಪ. ಒಲೆ—ತೂಗಾಡು. ಉರ—ಎದೆ. ೨. ವಂದಿ—ಹೊಗಳುಭಟ್ಟ. ನಮೇರು—ಸ್ವರ್ಗದ ಒಂದು ಮರ. ೩. ಕೊಂಕಿದ—ಬಗ್ಗಿದ. ಅಬಲಾ—ಸ್ತ್ರೀ. ನನೆಕೊನೆಹೋಗು—ಚಿಗುರು, ರೋಮಾಂಚವಾಗು. ೪. ಉದಧಿ—ಸಮುದ್ರ. ಇಳೆ—ಭೂಮಿ. ಈಳ್ದು—ಹಿಡಿದೆಳೆದು. ೫. ನೀರು—ಕಾಂತಿ. ಆರಿದ—ಬತ್ತಿಹೋದ.

೬. ಎಂದು ಬೆಸಗೊಂಡ ತಾಯಿಗೆ (ತನ್ನ) ಮನ(ಸ್ಸಿನಲ್ಲಿರುವ ನಿಜವಾದ ಕಾರಣ)ವನ್ನು ತೋರದೆ, (ಬೇರೆ ಏನೋ) ನೆಪದಿಂದ, (ತನ್ನ)

ಸುಯ್ ಕಂದಿಸಿದ ಅಧರಕ್ಕೆ (ತನ್ನ) ದಂತಗಳ ಕಾಂತಿಯ ಪ್ರಸರವು ಸುಧಾಬಿಂದುಗಳನ್ನು ತಳಿಯಲು, ಆರಸನು ಹೀಗೆ ಉಸಿರಿದನು:

೭. "ದೇವಿಯರ ಹರಕೆಯಿಂದ ನನಗೆ ಯಾವುದರಲ್ಲೂ ಕೊರತೆ ಯಿಲ್ಲ. ಹೋದ ಇರುಳಿನಲ್ಲಿ ಹೊಂದಾವರೆಗೊಳದ ಹಂಸ ಕಳಪೆ ಯಾದ ತಾವರೆಯ ಕೊಳದೊಳಗೆ ನಲಿಯುವ ಕನಸನ್ನು ಕಂಡೆ.

೮. "(ಇಂತಹ) ದುರ್ನಯದ ಕಾಣ್ಕೆಗೆ ನನ್ನ ಚಿತ್ತವು ಗೋದಾ ಮೆಯನ್ನು ಕಂಡ ನವಿಲಿನಂತೆ ಆಯಿತು, ಕಾರ್(ಗಾಲವನ್ನು) ಕಂಡ ಹಂಸನ ಹಾಗಾಯಿತು, ಹೂ ಬಿಟ್ಟ ಬಳ್ಳಿಯನ್ನು ಕಂಡ ವಿರಹಿಯ ಹಾಗಾಯಿತು."

೬. ಸುಯ್—ನಿಟ್ಟುಸಿರು. ಅಧರ—ಕೆಳತುಟಿ. ಪ್ರಸರ—ಸಾಲು. ಸುಧಾ ಬಿಂದು—ಅಮೃತದ ಹನಿ. ತಳಿ—ಚಿಮುಕಿಸು. ೭. ಹರಕೆ—ಶುಭವಾದ ಬಯಕೆ. ಕಳಪೆ—ಕೆಲಸಕ್ಕೆ ಬಾರದ್ದು. ೮. ಕಾಣ್ಕೆ—ದೃಶ್ಯ. ಗೋದಾಮೆ—ಈ ಪ್ರಾಣಿಯನ್ನು ಕಂಡರೆ ನವಿಲಿಗೆ ಹೆದರಿಕೆಯಂತೆ.

೯. ಜನಪತಿಯು (ತನ್ನ) ವನಿತೆಯ ಕೇಡನ್ನು ಕನಸಿನ ನೆಪ ದಿಂದ ಮರೆಮಾಡಲು, ತಾಯಿ ತಲ್ಲಣದಿಂದ ಮಗನಿಗೆ ಪೊಲ್ಲಮೆಯನ್ನು ನೆನೆದಳು. ವಂಚನೆ ಎಲ್ಲಿಯೂ ಕಡೆಯಲ್ಲಿ ಒಳ್ಪನ್ನು ಆಗಗೊಡುವುದಿಲ್ಲ.

೧೦. ಆಡಸಿದ ನಲ್ಲಳ ತಪ್ಪನ್ನು ತಡವಿಕ್ಕಿದರೆ, ಏಳು ಭವದ ಕೇಡು ಅಡಸುವ ಕೀಳ್‌ನುಡಿಯನ್ನು ತಾಯಿ ನುಡಿದಳು. ಒಂದು ಅಡಸಿದರೆ ಏಳು ಅಡಸಿತು ಎಂಬ ನುಡಿ ತಪ್ಪುವುದೇ!

೯. ವನಿತೆ—ಸ್ತ್ರೀ. ಪೊಲ್ಲಮೆ—ಕೇಡು. ಒಳ್ಪು—ಶುಭ. ೧೦. ನಲ್ಲಳು—ಪ್ರಿಯೆ. ಅಡಸಿದ—ಉಂಟಾದ. ಭವ—ಜನ್ಮ.

೧೧. "ದೇವಾ! ಈ ಕಸನು ತುಂಬಾ ದೋಷಾವಹವು. (ಇದನ್ನು) ಇಳಿಕೈಯಲಾಗದು. ನಿನ್ನ ಅಸಿಯ ಮುಖದಿಂದ ದಾವಣಿ ಗುರಿಯನ್ನು ತರಿದರೆ, ದೇವಿ ಶುಭವಲ್ಲದೆ ಇತರವಾದುದರ ವಿನಾಶವನ್ನು ದಯೆಗೆಯ್ಯುವಳು."

೧೧. ದೋಷಾವಹ—ದೋಷವನ್ನು ಹೊತ್ತು ತರತಕ್ಕದ್ದು. ಇಳಿಕೈ—ತಿರ ಸ್ಕರಿಸು. ಅಸಿ—ಕತ್ತಿ. ಮುಖ—ಅಲಗು. ದಾವಣಿಗುರಿ—ಹಗ್ಗ ಕಟ್ಟಿ ತಂದ ಕುರಿ.

೧೨. ಹಾಗೆ ತಾಯವಚನದಲ್ಲಿ ಶುಭೇತರವಿನಾಶವೆಂಬ ಶಬ್ದವು ಮುಂದೆ (ಆಗುವುದನ್ನು) ತಿಳಿಸಲು, ಶಾಂತಮನನಾದ ಇಳೇಶನು 'ಶಾಂತಂ ಪಾಪಂ' ಎನ್ನುತ್ತಾ, ಹೇಸಿ, ಕಿವಿಯನ್ನು ಮುಚ್ಚಿಕೊಂಡನು.

೧೨. ಶಾಂತಂ ಪಾಪಂ—ಪಾಪವು ಶಾಂತವಾಗಲಿ, ಹೆಚ್ಚದಿರಲಿ.

೧೩. "ಮೇಲನ್ನು ಬಗೆಯುವುದಾದರೆ, ಮರ್ತ್ಯನಾದವನಿಗೆ ವಧೆ ಹಿತವಾಗದು. ಮಾನಸನ ಬಾಳು ನಿತ್ಯವೇ? (ಅಲ್ಲ.) ಈಗಲೋ, ಅಥವಾ ಆಗಲೋ. ಚದುರನಾದವನು ಸಾಯುವ ಕುದುರೆಗೆ ಹುಲ್ಲನ್ನು ಅಡಕಿ ಕೆಡುವನೆ!"

೧೩. ಮಾನಸ—ಮನುಷ್ಯ. ಚದುರ—ಬುದ್ಧಿವಂತ. ಅಡಕು—ತುಂಬು.

೧೪. (ಯಶೋಧರನು ಹೀಗೆ) ಎಂದರೆ; ಅಂಬಿಕೆ ಮುನಿದು ಇಂತೆಂದಳು: ನಿಜವಾದ ಮೋಹದಿಂದ, ಸಲುಗೆಯಿಂದ, ನೃಪೇಂದ್ರನ ಮುಂದಿನ ಗತಿಗೆ ಆಗುವ ಬಟ್ಟೆಯನ್ನು ನೋಡಿ ಕಟ್ಟುವ ಹಾಗೆ, ಬಂದಳು.

೧೫. "ಗುರುವಚನವು ಅಲಂಘನೀಯವು ಎನ್ನದೆ ನಮ್ಮ ನುಡಿಯನ್ನು ಪರಿಹರಿಸುತ್ತೀಯೆ. (ಹಾಗೆ ಮಾಡಬೇಡ, ನಾನು ಹೇಳಿದುದನ್ನು) ನೀನು ಆದರದಿಂದ ಕೈಕೊಳ್ಳು. ಧರ್ಮದಲ್ಲಿ, ಅರಸುಗಳು, ಏನು, ಶಾಂತಿ ಎಂದರೆ ಅನುಸರಿಸುವುದಿಲ್ಲವೆ, ಹೇಳು?"

೧೪. ಬಟ್ಟೆ—ದಾರಿ. ೧೫. ಗುರುವಚನ ಅಲಂಘನೀಯ—ದೊಡ್ಡವರ ಮಾತು ಮೀರತಕ್ಕದ್ದಲ್ಲ. ಪರಿಹರಿಸು—ತಳ್ಳಿಹಾಕು.

೧೬. (ಎಂದು ತಾಯಿ ಹೇಳಿದುದಕ್ಕೆ ಮಗನು ಹೇಳಿದನು): "ಇವು ಧರ್ಮ ಎಂದು ಬಗೆಯುವುದಾದರೂ, ಅವಿವೇಕದಿಂದ ಶಾಂತಿ ಮಾಡಿದರೆ, ಬೇತಾಳವು ಮೂಡುವ ತೆರದಲ್ಲಿ ಹಿಂಸೆಯಿಂದ ಮೂಡುವ ಮುಂದಿನ ಕೇಡನ್ನು ಬಳಿಕ ಎಂತು ಕಳೆಯಲಿ?

೧೭. "ಜೀವದಯೆ (ಇದೇ) ಜೈನಧರ್ಮ. ಜೀವಹಿತ (ವನ್ನು) ನಂಬುವವರಿಗೆ ಹಿಂಸೆಯ ಮೋಹವು ಭಾವಿತವೇ? (ನೀವು) ತಪ್ಪಿ ನುಡಿದಿರಿ. ಅಬ್ಬೆ, ಕಾಪಾಡುವವರೇ ಕಣೆಯನ್ನು ಕೊಳ್ಳುವುದಾದರೆ, (ನಿ)ವಾರಿಸುವವರು ಉಂಟೇ?"

೧೬. ಮೂಡು—ಉಂಟಾಗು. ೧೭. ಭಾವಿತ— ಮನಸ್ಸಿನಲ್ಲಿ ಯೋಚಿಸಿದ್ದು. ಅಬ್ಬೆ—ತಾಯಿ. ಕಣೆ—ಬಾಣ. ವಾರಿಸು—ತಡೆ.

೧೮. (ಅದಕ್ಕೆ ತಾಯಿ) “ಆದರೆ, ಒಂದು ಹಿಟ್ಟಿನ ಕೋಳಿಯನ್ನಾದರೂ ಇಂದು ಇಕ್ಕಬೇಕು. (ಇಕ್ಕದೆ) ಮಿಕ್ಕಂದು ದೇವಿಗೆ ನನ್ನನ್ನು ಇಕ್ಕಿಯಾದರೂ ಈ ದುರಿತವನ್ನು, ಮಗನೆ, ಇಂದು ಪರಿಹರಿಸದೆ ಇರುವುದಿಲ್ಲ.”

೧೮. ಇಕ್ಕು—ಅರ್ಪಿಸು. ಮಿಗು—ಬಿಡು. ದುರಿತ—ಪಾಪ.

೧೯. ಎನ್ನಲು; ತಾಯಿಯ (ಮೇಲಿನ) ಮೋಹದಿಂದ ಜನಪನು ಒಡಂಬಟ್ಟು, ಮನಸ್ಸಿನಲ್ಲಿ ಹೀಗೆಂದನು: “ಭಾವನೆಯಿಂದ (ಕೂಡ) ಆಸ್ರವ ಆಗುವುದು. ನನಗೆ ಇನ್ನು ಎಂತಹ ಪಾಪ ಎದುರುಬರುವುದೋ!

೨೦. “ಮಾಡದಿದ್ದರೆ, ತಾಯಿಗೆ ಮರಣ. ಮಾಡಿದರೆ, ನನ್ನ ಒಂದು ಗತಿಗೆ ಕೇಡು. ಇಂದು ಏನು ಮಾಡಲಿ?” ಎಂದು ಮನಸ್ಸು ಆಂದೋಳವನ್ನು ಆಡಲು, ಇಳೇಶನು ತಮವನ್ನು ಅಪ್ಪುಕೈದನು.

೨೧. ಬಳಿಕ ಆ ನೃಪತಿಯು, ಮಹಾನವಮಿಯ ಮುಂದೆ ಬಂದ ಭೌಮಾಷ್ಟಮಿಯಲ್ಲಿ, ನಾನಾವಿಧದ ಅರ್ಚನೆಯಿಂದ, ತಾಯಿಯೂ ತಾನೂ ಚಂಡಿಕೆಯ ಪೂಜೆಗೆಂದು ಎದ್ದು ಬಂದನು.

೧೯. ಆಸ್ರವ—ಪುಣ್ಯವಾಗಲಿ ಪಾಪವಾಗಲಿ ಜೀವದ ಕಡೆಗೆ ಹರಿದು ಬಂದು ಅಂಟಿಕೊಳ್ಳುವುದಕ್ಕೆ ಆಸ್ರವ ಎಂದು ಹೆಸರು. ೨೦. ಆಂದೋಳವಾಡು—ಈ ಕಡೆಗೂ ಆ ಕಡೆಗೂ ಉಯ್ಯಾಲೆಯಂತೆ ಅನಿಶ್ಚಿತವಾಗಿ ತೂಗು. ಇಳೇಶ—ರಾಜ. ತಮ—ಅಜ್ಞಾನ, ಪಾಪ. ಅಪ್ಪುಕೈ—ತಬ್ಬಿಕೊ.

೨೨. (ಹಿಟ್ಟಿನ) ಚರಣಾಯುಧವು ಕರಂ ಎಸೆಯೆ ಸಮೆದು ಬಂತು. ಅದರ ಚಿತ್ರಪರಿಶೋಭೆಗೆ ಒಂದು ವ್ಯಂತರನು ಆಶ್ರಯಿಸಿತ್ತು. ಜನನಿ ಉಗ್ಗಡಿಸಿ ಹರಸಿದಳು. ಪುತ್ರನು ಹೊಯ್ದನು.

೨೩. (ಆಗ) ಕೂಗಿ ಕರೆಯುವ ದುರಿತಗಳ ಬಲವಾದ ಉಲಿ ಎಂಬಂತೆ (ಹಿಟ್ಟಿನ ಕೋಳಿಯ) ತಲೆಯಿಂದ ಕುಕ್ಕೂಕೂ ಎಂಬ ಉಲಿ ನೆಗೆಯಿತು. ಹಿಟ್ಟಿನ ಕೋಳಿಯ ತಲೆಯನ್ನು ಹಿಡಿಯುವ ಹಾಗೆ ಅಟ್ಟಿ ಇಷ್ಟು ಹಾರಿತು.

೨೪. ಹೊಡೆದರೆ, ಕೃಕವಾಕುವಿನ ನಿನದವು ಬಿಡದೆ (ಒಂದೇ ಸಮನೆ) ಉಣ್ಮುತ್ತಿರಲಾಗಿ, (ತನ್ನ) ಕೈಯ ಬಾಳು ಬಿದ್ದುಹೋಗಲು,

ಹೊಯ್ ಪಡೆದಂತೆ, ಹಂದೆಯನ್ನು ಹಾವು ಅಡರಿದಂತೆ ಆಗಿರಲು, ಯಶೋಧರನು ಬೆರಗಾದನು.

೨೨. ಚರಣಾಯುಧ—ಕಾಲೇ ಆಯುಧವಾದ ಕೋಳಿ. ಕರಂ—ತುಂಬಾ. ಎಸೆ—ಕಂಗೊಳಿಸು. ಸಮೆ—ಸೃಷ್ಟಿ ಮಾಡು. ಚಿತ್ರ—ವಿಚಿತ್ರ. ವ್ಯಂತರ—ಆಕಾಶ ವಾಸಿಯಾದ ಭೂತ. ಉಗ್ಗಡಿಸು—ಘೋಷಿಸು. ೨೩. ಉಲಿ—ಕೂಗು. ಅಟ್ಟೆ—ತಲೆಯಿಲ್ಲದ ದೇಹ. ೨೪. ಕೃಕವಾಕು—ಕೋಳಿ. ನಿನದ—ಧ್ವನಿ. ಉಣ್ಮು—ಉಕ್ಕು. ಬಾಳ್—ಕತ್ತಿ. ಹೊಯ್‌ಪಡೆದ—ಏಟುತಿಂದ. ಹಂದೆ—ಹೇಡಿ. ಅಡರು—ಮೇಲೆ ಹತ್ತು.

೨೫. "ಏಕೆ ಕನಸೆಂದು ನುಡಿದೆನು? ಇದೇಕೆ ಅಂಬಿಕೆ ಬಲಿಯನ್ನು ಒಡ್ಡಿದಳು? ಈ ಕೃತಕವಾದ ತಾಮ್ರಚೂಡನು ಏಕೆ ಕೂಗಿತು? ಇದೇಕೆ ಎಂದು, ವಿಧಿಯ ವಿಳಸನವನ್ನು ಯಾರು ಬಲ್ಲವರು?

೨೬. "ಅಮೃತಮತಿ ಎಂಬ ಪಾತಕಿಯ ಮಾಯೆ ವನವಾಯಿತು. ಚಂದ್ರಮತಿಯೆಂಬ ಮಾತೆಯ ಮಾತು ನಮಗೆ ಬಲೆಯಾಯಿತು. ಹಿಂಸನವು ಅಮೋಘವಾದ ಶರವಾಯಿತು. ಆತ್ಮವೆಂಬ ಕುರಂಗವು ಕೆಡೆಯಿತು."

೨೭. ಎಂದು ಮನಸ್ಸು ಮರುಗುವಷ್ಟರ ಮಟ್ಟಿಗೆ ನೊಂದು, ಅಲ್ಲಿಂದ ತಳರ್ದು, ಉದ್ವೇಗವು ಎಳೆದು ಒಯ್ವ ಹಾಗೆ ಮನೆಗೆ ಬಂದು, 'ಈ ರಾಜ್ಯದ ದಂದುಗವು ಏಕೆ?' ಎಂದು (ಅದನ್ನು) ತೊರೆಯಲು ಉದ್ಯತನಾದನು.

೨೮. ಪರಿವಾರವನ್ನೂ ಪ್ರಧಾನರನ್ನೂ (ಅವರವರ ಸ್ಥಾನದಲ್ಲಿ) ಇರಿಸಿ, (ಮಗನಾದ) ಯಶೋಮತಿಗೆ ರಾಜ್ಯವನ್ನು ಕೊಟ್ಟು, ಯಶೋಧರನು ಹೀಗೆ ತಪಸ್ಸಿಗೆ ನಡೆಯಲಿರಲಾಗಿ, ಅರಸಿ(ಯಾದ ಅಮೃತಮತಿ) ಮೃತ್ಯುವಿನಂತೆ ಬಂದು, ಇಂತೆಂದಳು:

೨೫. ಅಂಬಿಕೆ—ತಾಯಿ. ಕೃತಕ—ಮನುಷ್ಯಮಾಡಿದ್ದು. ತಾಮ್ರಚೂಡ—ಕೆಂಪು ಜುಟ್ಟಿನ ಕೋಳಿ. ೨೬. ಕುರಂಗ—ಜಿಂಕೆ. ೨೭. ತಳರ್ದು—ಎದ್ದು ಹೊರಟು. ದಂದುಗ—ಚಿಂತೆ. ಉದ್ಯತ—ಉದ್ಯಮಿಸಿದವನು.

೨೯. "ಹೂವಿನ ಸೌರಭದ ಮಾಳ್ಕೆಯಿಂದ ದೇವರ ಬಳಿಯಲ್ಲಿ

ಬರುವೆನು. (ತಪಸ್ಸಿಗೆ) ಗಮನಮಾಡುವ ಪ್ರಸ್ತಾವದಲ್ಲಿ, ಇಂದು ನೀವೂ ದೇವಿಯೂ ನನ್ನ ಅರಮನೆಯಲ್ಲಿ ಆರೋಗಿಸುವುದಾಗಲಿ."

೩೦. ಎನ್ನಲು; ಜನಪತಿ ಮನಸ್ಸಲ್ಲದ ಮನಸ್ಸಿನಲ್ಲಿ ಒಡಂಬಟ್ಟು ಬಂದು, ತಾಯಿಯ ಒಡನೆ ಉಣ್ಣಲು; (ಅಮೃತಮತಿ) ನಂಜಿನ ಲಡ್ಡುಗೆಯನ್ನು (ಬಡಿಸಿ,) 'ಮಾಡಿದುದನ್ನು ಉಣು, ಮಹಾರಾಜ' ಎನ್ನಲು, ಸವಿದು ಉಂಡನು.

೨೯. ಸೌರಭ—ಸುಗಂಧ. ಮಾಳ್ಕೆ—ರೀತಿ. ಪ್ರಸ್ತಾವ—ಸಂದರ್ಭ. ದೇವಿ—ರಾಜನ ತಾಯಿ. ಆರೋಗಿಸು—ಆಹಾರ ತೆಗೆದುಕೊ.

೩೧. ಅರಸನ ಮೂದಲೆ ಮನಸ್ಸಿನೊಳಗೆ ಇರಲು, ಪಾತಕಿ ಮೇಳಿಸಿಕೊಂಡು ಬಂದು ಬೆರಗಿಂದ ಗಂಡನನ್ನು ಕೊಂದಳು. ಆ ಸ್ತ್ರೀಯ ಚರಿತವು, ಅದೇನು! ಹೆಂಗಸರ ಕೃತಕವು ಕಳೆಯಲು ಅರಿದು.

೩೧. ಮೂದಲೆ—ಹಂಗಿಸಿದ ಮಾತು. ಮೇಳಿಸು—ಹೊಂದಿಕೊ. ಬೆರಗು—ಥಳಕು. ಚರಿತ—ನಡತೆ. ಕೃತಕ—ಅಸಹಜವಾದ ಗುಣ. ಅರಿದು—ಅಸಾಧ್ಯ.

೩೨. ಮೃತಿಗೆ ಆ ಪಕ್ವಾನ್ನವೇ ಉದ್ದೀಪನಪಿಂಡದ ಹಾಗಾಗಲು, ಅಘದಿಂದ ಜನ್ಮವೆಂಬ ಲತೆಗೆ ಬೀಜದ ಆವಾಪವು ಎಂಬಂತೆ (ಸತ್ತ ಯಶೋಧರನು) ವಿಂಧ್ಯದಲ್ಲಿ ಕಲಾಪಿಸ್ತ್ರೀಯ ಉದರದಲ್ಲಿ ಒಗೆದನು.

೩೨. ಮೃತಿ—ಸಾವು. ಪಕ್ವ—ಬೇಯಿಸಿದ. ಉದ್ದೀಪನ ಪಿಂಡ—ಕೆರಳಿಸುವ ಮುದ್ದೆ. ಅಘ—ಪಾಪ. ಆವಾಪ—ನೆಡುವಿಕೆ. ಕಲಾಪಿ—ನವಿಲು. ಉದರ—ಹೊಟ್ಟೆ. ಒಗೆ—ಹುಟ್ಟು.

೩೩. ಹಾಗೆ ಒಗೆದು, ಮೊಟ್ಟೆ ಒಡೆದು, ಅಲ್ಲಿಂದ ತೊಲಗದು, ತುಪ್ಪುಳು ಇಡದು, ಕಾಲು ಬಲಿಯದು, ಕಣ್ಣನ್ನು ತೆರೆಯದು—ಎಂಬ ಹೊತ್ತಿಗೆ, ಕೃತಾಂತನ ಹರಿಯಂತೆ ಕವಿದು (ಬಂದು) ಬೇಟೆಯಲ್ಲಿ ಒಬ್ಬನು

೩೪. ಬೇಡನು, ಪಿಳುಕು ಒತ್ತಿನ ತಾಯಿ (ತನ್ನನ್ನು) ಓಡಲು ಬಿಟ್ಟ ಹೊತ್ತಿನಲ್ಲಿ, (ಅದನ್ನು) ಕೊಂಡು ಬಂದು, ಆ ಪಿಳುಕನ್ನು ಬೇಡಿತಿಗೆ ಸಲಹಲು ಕೊಟ್ಟರೆ, ಅದು ಗೂಡಿನಲ್ಲಿ ಬೆಳೆದು, ಅಂಗಚ್ಛವಿಯನ್ನು ತಳೆಯಿತು.

೩೫. ನವರತ್ನದ ಪಂಜರದಲ್ಲಿ ದಿವಿಜಶರಾಸನದ ಮರಿಯನ್ನು ಇರಿಸಿದ ಹಾಗೆ, ಎತ್ತುವ ಸೋಗೆಯ ಸುತ್ತಿನಲ್ಲಿ ಆಡುವ (ಆ) ಕೇಕಿಯ ಭಂಗಿಯು ಲೋಕವನ್ನು ಸೋಲಿಸುವುದು.

೩೩. ಕೃತಾಂತ—ಯಮ. ಹರಿ—ಓಟ. ೩೪. ಪಿಳುಕು—ಪಿಳ್ಳೆ, ಮರಿ. ಒತ್ತಿನ—ಹತ್ತಿರದ. ಅಂಗಚ್ಛವಿ—ದೇಹಕಾಂತಿ. ೩೫. ಶರಾಸನ—ಬಾಣ ಕುಳಿತು ಕೊಳ್ಳುವ ಬಿಲ್ಲು. ದಿವಿಜಶರಾಸನ—ಇಂದ್ರಧನುಸ್ಸು. ಸೋಗೆ—ನವಿಲಿನ ಬಾಲ. ಕೇಕಿ—ನವಿಲು. ಭಂಗಿ—ರೀತಿ.

೩೬. (ಇತ್ತ) ಚಂದ್ರಮತಿಯೂ ಸತ್ತು, ಕರಹಟದಲ್ಲಿ ಬೇಟೆಯ ಕುಕ್ಕುರಿಯಾದಳು. ಬಳಿಕ ಆ ಎರಡೂ ಉಪಾಯನವೆಂಬ ಘಟನೆ ಯಿಂದ ಯಶೋಧರ ಸುತನಾದ (ಯಶೋಮತಿಯ) ಅರಮನೆಯನ್ನು ಸಾರಿದುವು.

೩೭. ತಮಗೆ ಅಂಜುವವರಿಗೆ ತಾವು ಅಂಜುವ, ತಮ್ಮ ಎಂಜ ಲನ್ನೆ ತಿನ್ನುವವರ ಎಂಜಲನ್ನು ತಾವು ತಿನ್ನುವ, ಅವನಿಪರು ಆದ ಅಲ್ಲಿಯೆ ನಾಯೂ ನವಿಲೂ ಆಗುವ ಅಷ್ಟಾಯಿತು. ಪಾಪದ ಫಲವನ್ನು ನೋಡು.

೩೬. ಕರಹಟ—ಬೆಟ್ಟದ ಹೆಸರು ಇರಬೇಕು. ಕುಕ್ಕುರಿ—ಹೆಣ್ಣು ನಾಯಿ. ಉಪಾಯನ—ಅರಸರ ಬಳಿಗೆ ಆಳುಗಳು ತಂದೊಪ್ಪಿಸುವ ಕಾಣಿಕೆ.

೩೮. ನವಿಲು ಅಮೃತಮತಿಯ ಶಯ್ಯೆಯ ಧವಳಾಗಾರದಲ್ಲಿ ಆಡುತ್ತಾ ಇದ್ದು, ಬದಗನು ತನ್ನವಳೊಡನೆ ಕೂಡಿರುವುದನ್ನು ನಿಟ್ಟಿಸಿ, ಭವರೋಷದಿಂದ ಅಷ್ಟವಂಕನ ಕಣ್ಣನ್ನು ಇರಿಯಿತು.

೩೯. 'ನಾನು ಬೆಂದೆ' ಎಂದು (ಆ) ಪಾಣ್ಬೆ ಕನಲ್ದು, ನವಿಲನ್ನು ಅಡಸಿ ಹೊಯ್ಯಲು, ಸುಧಾಂಶುಬಿಂಬದ ಕೊರಲಿನಿಂದ ಪಚ್ಚೆಯ ಪದ ಕವು ಬೀಳುವಂತೆ, (ನವಿಲು) ಮೇಲಿನ ನೆಲೆಯಿಂದ ಬಿದ್ದಿತು.

೩೮. ಭವರೋಷ—ಹಿಂದಿನ ಜನ್ಮದಿಂದ ಬಂದ ರೋಷ. ೩೯. ಪಾಣ್ಬೆ—ಹಾದರಮಾಡಿದವಳು. ಕನಲ್—ಕೋಪಗೊಳ್ಳು. ಅಡಸಿ—ಅಟ್ಟಿಸಿ ಹಿಡಿದು. ಸುಧಾಂಶು—ಚಂದ್ರ.

೪೦. ಆಗಲೇ ಅರಸನೂ ನೆತ್ತದ ಭರದಿಂದ 'ಕೊಳ್' ಎನುತ್ತಾ (ದಾಳವನ್ನು) ಇಕ್ಕಲು, ಅಂಬಾಚರಿಯಾದ ಕುಕ್ಕುರಿ 'ನವಿಲನ್ನು ಕೊಳ್

ಎಂದರು' ಎಂದೇ ಭ್ರಮಿಸಿ, ನೊಂದು ಬೀಳುವ ನಂದನಚರನನ್ನು ಹಿಡಿಯಿತು.

೪೧. ಮತ್ತೆ ನೃಪನು 'ನೃತ್ಯಚಮತ್ಕಾರನಾದ ಮಯೂರನನ್ನು ನಾಯಿ ತಿಂದಿತು' ಎಂದು ಆ ನೆತ್ತದ ಮಣೆಯಿಂದ ಇರಿದರೆ, (ಅದರ) ನೆತ್ತಿ ಹಿಸಿಯಿತು. ಹಾಗೆ ಆ ಎರಡೂ (ನಾಯೂ ನವಿಲೂ) ಸತ್ತುವು.

೪೦. ನೆತ್ತ—ಪಗಡೆ. ಅಂಬಾಚರಿ—ಹಿಂದಿನ ಜನ್ಮದಲ್ಲಿ ತಾಯಿ ಆಗಿದ್ದ ಜೀವ. ನಂದನಚರ—ಹಿಂದಿನ ಜನ್ಮದಲ್ಲಿ ಮಗನಾಗಿದ್ದ ಜೀವ. ೪೧. ನೃತ್ಯಚಮತ್ಕಾರ—ಚಮತ್ಕಾರವಾಗಿ ನರ್ತನಮಾಡುವ. ಮಯೂರ—ನವಿಲು.

೪೨. ಆ ಎರಡರ ಸಾವಿನಿಂದ, ತಂದೆತಾಯಿಯರು ಅಳಿದ ಹಾಗಿರಲು, ಇಳೇಶನು ಮರುಗಿದನು. (ಎಷ್ಟೇ ಆದರೂ) ಕಣ್ಣು ಅರಿಯದಿದ್ದರೂ ಕರುಳು ಅರಿಯದೆ! ಭವಾಂತರಗಳ ವ್ಯಾಮೋಹವು ಮರುಗಿಸದೆ ಇರುವುದೆ!

೪೨. ಭವಾಂತರ—ಬೇರೆ ಬೇರೆ ಜನ್ಮಗಳು.

೪೩. (ಬಳಿಕ) ಆ ನಾಯಿ ಆ ವಿಂಧ್ಯನಗದಲ್ಲಿ ಹಾವಾಯಿತು. ಆ ನವಿಲೂ ಎಯ್ಯಮೃಗವಾಯಿತು. (ಹಿಂದಿನ) ಹಗೆ ಮಿಗಲು, ಹುಲಿ (ಯನ್ನು ಹಿಡಿಯಲು ಸೆಳೆಯಾಗಿ ಕಟ್ಟುವ) ಕೋಣವು ಹುಲ್ಲಸರವಿಯನ್ನು ಮೇಯುವ ಹಾಗೆ, ಆ ಎಯ್ ಹಾವನ್ನು ತಿಂದಿತು.

೪೩. ನಗ—ಪರ್ವತ. ಎಯ್ಯಮೃಗ—ಮುಳ್ಳುಹಂದಿ. ಸರವಿ—ಹಗ್ಗ.

೪೪. ಉರಗಿಯನ್ನು ಎಯ್ ಹಿಡಿದರೆ, ಅದನ್ನು, ಬೆಕ್ಕು ಕೊಕ್ಕನನ್ನು ಚೆನ್ನಾಗಿ ಹಿಡಿಯುವಂತೆ, ಕುರಂಗರಿಪುವು ಹಿಡಿಯಿತು. 'ಪರಚಿಂತಾಕರ ಏಹಿ' ಎನ್ನಿಸುವ ಸೂಕ್ತಿ ತಪ್ಪದು. ಅಮೋಘವಾದದ್ದು, (ಈ ಸೂಕ್ತಿ.)

೪೪. ಉರಗಿ—ಹೆಣ್ಣು ಹಾವು. ಕೊಕ್ಕ—ಒಂದು ಹಕ್ಕಿ. ಕುರಂಗರಿಪು—ಜಿಂಕೆಯ ಶತ್ರು, ಹುಲಿ. ಪರಚಿಂತಾಕರ ಏಹಿ—ಪರರಿಗೆ ಚಿಂತೆಯನ್ನು ಉಂಟುಮಾಡುವವನೇ, ಹೀಗೇ ಬಾ. ಸೂಕ್ತಿ—ಒಳ್ಳೆಯ ಮಾತು.

೪೫. ಎಯ್ಯಮೃಗವು ಉಜ್ಜೇನಿಯ ದೇಶದಲ್ಲಿ ಎಸೆವ ಸಿಂಪಾನದಿಯಲ್ಲಿ ಮೀನಾಯಿತು. ಆ ನಾಗನೂ ತಾನು ಅಲ್ಲಿ ಮೊಸಳೆಯಾಯಿತು. ಆಗಿ, ಬೆಳೆಯಲು, ಮತ್ತೊಂದು ದಿನ

೪೬. ನದಿಯು ಕಣ್ ತೆರೆದ ಹಾಗೆ ಪೊಳಂಕಿದ (ಆ) ಮೀನನ್ನು (ಕಂಡು, ಅದನ್ನು ಹಿಡಿಯಬೇಕೆಂದು) ಮೊಸಳೆ ಹಾಯಲು; (ಮೀನು ಸಿಕ್ಕುವ ಬದಲು ಅದಕ್ಕೆ) ನರಪತಿಯ ವಿನೋದದ ಗುಜ್ಜನು ಸಿಕ್ಕಲು, (ಆ ಮೊಸಳೆ ಅವನನ್ನು) ಹಿಡಿಯಿತು. ಅಧಿಪತಿ ಅದನ್ನು ಜಾಲಗಾರರಿಂದ ತೆಗೆಯಿಸಿದನು.

೪೭. (ಅದನ್ನು) ಹಲವು ರೀತಿಯ ನಿಗ್ರಹದಿಂದ ಕೊಲ್ಲಿಸಿದರೆ, ಆ ಮೊಸಳೆ ಸತ್ತು; ಅದೇ ಬಳಿಕ ಆ (ಊರಿನ) ಹೊಲಗೇರಿಯ ಆಡಿನ ಒಡಲಿನಲ್ಲಿ ನೆಲಸಿ, ಬಳಿಕ ಆಡಿನ ರೂಪಿನಿಂದ ಒಯ್ಯನೆ ಒಗೆಯಿತು.

೪೫. ನಾಗ—ಹಾವು. ೪೬. ಪೊಳಂಕು—ಹೊಳೆದು ಹಾರು, ಚಿಮ್ಮು. ಗುಜ್ಜ—ಕುಬ್ಜ. ಅಧಿಪತಿ—ರಾಜ. ಜಾಲಗಾರ—ಬಲೆ ಬೀಸುವ ಬೆಸ್ತ. ೪೭. ನಿಗ್ರಹ—ಹಿಂಸೆ. ಒಡಲು—ದೇಹ. ಒಯ್ಯನೆ—ಕ್ರಮವಾಗಿ. ಒಗೆ—ಹುಟ್ಟು.

೪೮. (ಹಿಂದೆ) ಎಯ್ ಆಗಿದ್ದ ಮೀನು ಮತ್ತೊಮ್ಮೆ ಜಾಲದಲ್ಲಿ ಸಿಕ್ಕಿತ್ತು. ಅದನ್ನು, ಶ್ರಾದ್ಧಕ್ಕೆ ಅತ್ಯುತ್ತಮವಾದ ಲೋಹಿತಮತ್ಸ್ಯವನ್ನು, ಉತ್ತಮವೆಂದು ಒಂದು ಕಡೆಯಿಂದ ಅರಸನು ಅಡಿಸಿದನು.

೪೯. ಉಳಿದ ಕಡೆಯಲ್ಲಿ ಜೀವವು ಏರುತ್ತಾ ಇಳಿಯುತ್ತಾ ಇರಲು, (ಅದನ್ನು) ನೀರೊಳಗೆ ಇರಿಸಿ, ಜೀವಶ್ರಾದ್ಧಕ್ಕಾಗಿ ಉಳಿದಿದ್ದ ಮಹಾಜನಗಳು (ಹಸಿವು) ಕಳೆಯುವಂತೆ (ಹೊಟ್ಟೆ ತುಂಬ) ಉಂಡು ಆಪೋಶಿಸುವಲ್ಲಿ (ಆ ಮೀನು) ತನ್ನನ್ನು (ತಾನು ಹೀಗೆಂದು) ನೆನೆಯಿತು:

೫೦. "ನಾನು ಮೀನಾಗಿ ಸಾಯುತ್ತಿರುವೆ. ಈ ಹಾರುವರು ಯಶೋಧರನು ಸುಖದಿಂದ ಆ ನಾಕದಲ್ಲಿ ಇರಲಿ, ಎಂದು ಊಳುವರು. (ಅದನ್ನು) ಈ ನೃಪನೂ ನಂಬುವನು. ಅಕ್ಕಟಾ, ವಿಧಿಯೇ!"

೪೮. ಎಯ್—ಮುಳ್ಳುಹಂದಿ. ಜಾಲ—ಬಲೆ. ಲೋಹಿತಮತ್ಸ್ಯ—ಕೆಂಪು ಮೀನು. ಅಡಿಸು—ಅಡಿಗೆ ಮಾಡಿಸು. ೪೯. ಆಪೋಶಿಸು—ಆಪೋಶನ ತೆಗೆದುಕೊ. ೫೦. ನಾಕ—ಸ್ವರ್ಗ. ಊಳು—ಒಂದೇ ಉಸಿರಿಗೆ ಕೂಗು.

೫೧. ಎನ್ನುತ್ತಾ, ಜಾತಿಸ್ಮರನಾದ (ಆ) ಅನಿಮೇಷವು (ತನ್ನ) ಜೀವಿತದ ಅಂತ್ಯದಲ್ಲಿ, ಮೊದಲು (ತಾನು) ಒಗೆದ ಆಡಿನ ಬಸಿರಲ್ಲಿ

ಹೋತದ ರೂಪದಿಂದ ಬಂದಿತು. ಬೆಳೆದು, ಬಳಿಕ ಮದನನಿಂದ ಉನ್ಮತ್ತವಾದುದು (ಆಗಿ)

೫೨. 'ಸೊಕ್ಕಿದ ಗೂಳಿ ತಾಯನ್ನು ಏರಿತ್ತು' ಎಂಬ ರೀತಿಯಲ್ಲಿ ಬೆದೆಯಾದ (ತನ್ನ) ತಾಯಿಯನ್ನು ಅದು ಏರಿತು. (ಆಗ) ಮತ್ತೆ ಒಂದು ಬಸ್ತಕವು ಅದನ್ನು ಇರಿಯಲು, (ಆ ಹೋತವು) ಸತ್ತು, (ಅದರ) ಜೀವವು (ಆ) ಅಜೆಯಲ್ಲಿ ಹೊಕ್ಕಿತು.

೫೩. ಅಲ್ಲಿಯೆ ಹೋತವಾಗಲು, ಅದು ಮೆಲ್ಲನೆ ತೆನೆ ತುಂಬಿ ಸುಳಿಯಲು ಕಂಡು, ಒಮ್ಮೆ ಮಹೀವಲ್ಲಭನು ಬೇಟೆಯಲ್ಲಿ ಅಡಗಿಲ್ಲದೆ ಬರುತ್ತಾ ಇದಿರಿನಲ್ಲಿ (ಬಂದ ಆ) ಅಜಗರ್ಭಿಣಿಯನ್ನು ಎಚ್ಚನು.

೫೪. ಇಸಲು, ಪಶುಮರಿ ಯೋನಿಮುಖದಿಂದ ಪ್ರಸವವಾಗುವುದಕ್ಕೆ ಅಲಸಿದ ಹಾಗೆ ಏರಿನ ಬಾಯಿಂದ ತಾಯಿಯದೊಂದು ಪ್ರಾಣದೊಡನೆ ಬಿದ್ದುದನ್ನು (ಕಂಡು) ಅರಸನು ರಕ್ಷಿಸಲು ಕರುಣದಿಂದ ಮಾದರನಿಗೆ ಇತ್ತನು.

೫೧. ಜಾತಿಸ್ಮರ—ಹಿಂದಿನ ಜನ್ಮವನ್ನು ಜ್ಞಾಪಿಸಿಕೊಂಡ. ಅನಿಮೇಷ—ರೆಪ್ಪೆಯಿಲ್ಲದ ಮೀನು. ಒಗೆ—ಹುಟ್ಟು. ೫೨. ಏರು—ಮೇಲೆ ಹತ್ತು. ಬಸ್ತಕ—ಗಂಡು ಆಡು. ಅಜೆ—ಹೆಣ್ಣು ಆಡು. ೫೩. ತೆನೆತುಂಬು—ಬಸಿರು ತುಂಬು. ಮಹೀವಲ್ಲಭ—ರಾಜ. ಅಡಗು—ಮಾಂಸ. ಎಚ್ಚನು—ಬಾಣದಿಂದ ಹೊಡೆದನು. ೫೪. ಇಸು—ಎಸು, ಬಾಣದಿಂದ ಹೊಡೆ. ಯೋನಿಮುಖ—ಪ್ರಸವವಾಗುವ ಸ್ಥಳದ ಬಾಯಿ. ಅಲಸು—ಆಲಸ್ಯಪಡು. ಏರು—ಗಾಯ. ಮಾದರ—ಹೊಲೆಯ.

೫೫. ಒಮ್ಮೆ ಯಶೋಮತಿಯು, ಮೃಗಯಾದಲ್ಲಿ ನರ್ಮವಾದ ಮನವುಳ್ಳವನು (ತನ್ನೂರಿನ ಮಾರಿಗೆ) ಹರಸಿ ನಡೆದು, ಮೃಗವನ್ನು (ಎಂದರೆ) ಒಂದು ಎಮ್ಮೆಯ ಹೋರಿಯನ್ನು ಪಡೆದು, (ಅದನ್ನು) ಊರಿನ ಮಾರಿಗೆ ಇತ್ತನು. ಮತ್ತೆ ಅದನ್ನೇ ಮಹಳಕ್ಕೆ ಇತ್ತನು.

೫೫. ಮೃಗಯಾ—ಬೇಟೆ. ನರ್ಮ—ವಿನೋದ. ಮಹಳ—ಮಹಾಲಯ, ಮಾರಿಯ ದೇಗುಲ.

೫೬. ಅದರ ಅಡಗು ಮುಗ್ಗಿ ಹುಳು ಹತ್ತಿದರೆ, (ಅದು) ಆರುವುದಕ್ಕಾಗಿ (ಅದನ್ನು) ಹರಡಲು, ಕಾಗೆಯೂ ನಾಯೂ ಮುಟ್ಟದರೆ,

ಅದನ್ನೆ ಶುದ್ಧವನ್ನಾಗಿ ಮಾಡುವ (ಮಂತ್ರವ)ದನ್ನು ಪುರೋಹಿತರೆಲ್ಲರೂ ಇಂತೆಂದು ಓದಿದರು:

೫೭. "ಶುಚಿರಜರಜಸಿ ಭವೇನ್ಮಾಸ್ ಪಚನೇ ಶ್ವಸ್ಪೃಷ್ಟ ದೋಷಂ' ಎಂಬುದು ವೇದಗಳಲ್ಲಿ ಪ್ರಚುರ ಎನ್ನಲು; ಕೇಳಿ, ನೃಪನು ಆ ವಚನವನ್ನೂ ನಂಬಿ, ನೆರೆದ ಹೊಲೆಯರ ಹೋತನ್ನು

೫೮. ತರಿಸಿ, ಪರಿಶುದ್ಧಿಗೈದು, ಅದನ್ನು ಇರಿಸಿದರೆ; (ಅದನ್ನು) ಆ ಹಾರುವರು ಉಂಡು, ತಣಿದು ಎದ್ದು; 'ಯಶೋಧರ ಚಂದ್ರಮತಿ ಗಳು ಸ್ವರ್ಗದ ಸುಖವನ್ನು ಒಸೆದು ಉಣುವರೆ?' (ಎಂದು ಯಶೋಮತಿ) ಎಂದರೆ; 'ಓಹೋ!' ಎಂದರು.

೫೬. ಅಡಗು—ಮಾಂಸ. ೫೭. ಮಂತ್ರಕ್ಕೆ ಅರ್ಥ—ಮಾಂಸವನ್ನು ಬೇಯಿಸುವಾಗ ನಾಯಿ ಮುಟ್ಟಿದ ದೋಷ ಆಡಿನ ರಜಸ್ಸಿನಿಂದ ಶುದ್ಧವಾಗುತ್ತದೆ. ಪ್ರಚಾರ—ವಾಡಿಕೆ. ೫೮. ಒಸೆದು—ಪ್ರೀತಿಯಿಟ್ಟು.

೫೯. ಆ ವಿಪ್ರರ ಘೋಷಣವು (ತನ್ನ)ಸ್ಮೃತಿಗೆ ಆವಹನ ವಿಧಾ ನವಾದ ಹಾಗೆ, (ಆ) ಅಜಪೋತವು (ಹೀಗೆಂದು) ಭಾವಿಸಿತು: "ನಾನು ಯಶೋಧರದೇವನೆ! ಈತನು ನನ್ನ ಆತ್ಮಜನಾದ ಯಶೋಮತಿ!

೬೦. "ಇಲ್ಲಿ ಹೋತವಾದೆನು. ಸ್ವರ್ಗದಲ್ಲಿ ಹೇಗೆ ಉಂಡೇನು? ಉಂಡ ಹಾರುವರು ಒಲಿದುದನ್ನು ಗೆಡೆಯುತ್ತಾರೆ. ಹೋತವನ್ನು ಕೊಂದು, ದಿವಕ್ಕೆ ಅದು ಮಂತು ಆಗಿರಲು, (ನಾವು ದಿವಕ್ಕೆ) ಸಲ್ಲುವೆವು, ಎನ್ನುವರು. ಇದನ್ನು ಏನೆಂ(ದು ಎಂ)ದರು?

೬೧. "ಈ ನಗರಿ ನಮ್ಮ ಉಜ್ಜೇನಿ ಆಗಿರುವುದು. ಇದು ನಾನಿ ರುವ ನೆಲೆಯ ಧವಳಾಗಾರ. ಇದೂ ತಾನು ಅಮೃತಮತಿಯ ಮಾಡ. ಇದರಲ್ಲಿ (ಆ) ಮಾನಿನಿ ನನಗೆ ನಂಜನ್ನು ಇಟ್ಟಳು. (ನಾನು) ಇದರಲ್ಲಿ ಮುಡುಪಿದೆನು.

೬೨. "(ಆ) ಕಷ್ಟೆ ಅಷ್ಟವಂಕನೊಡನೆ ಇದ್ದಳೊ? ಅಥವಾ ಬದುಕಿ ದಳೊ? ಅಥವಾ (ದುಃಖದಲ್ಲಿ) ಅದ್ದಿದಳೊ? ಅಥವಾ ಅದು ಹೇಗೆ ಇದ್ದಳೊ? ಅದೇಕೆ ಕಾಣೆನು?" ಎನುತ್ತಾ, ಕೋಟಲೆಗೆ ಕೋಡು ಮೂಡಿದ ತೆರದಿಂದ (ಆ ಆಡು) ಇದ್ದಿತು.

೫೯. ಆವಹನ ವಿಧಾನ—ಬರಮಾಡಿಕೊಳ್ಳುವ ರೀತಿ. ಅಜಪೋತ—ಆಡಿನ ಮರಿ. ಆತ್ಮಜ—ಮಗ. ೬೦. ಒಲಿದುದು—ಮನಸ್ಸಿಗೆ ಬಂದದ್ದು. ಗೆಡೆ—ಅಸಂಬದ್ಧವಾಗಿ ಹರಟು. ದಿವ—ಸ್ವರ್ಗ. ಮಂತು—ಕಡೆಗೋಲು. ೬೧. ಮಾಡ—ಉಪ್ಪರಿಗೆಯ ಮನೆ. ಮಾನಿನಿ—ಕೋಪಗೊಂಡ ಸ್ತ್ರೀ. ನಂಜು—ವಿಷ. ಮುಡುಪು—ಸಾಯಿ. ೬೨. ಕಷ್ಟೆ—ಪಾಪಿ. ಅದ್ದು—ಮುಳುಗು. ಕೋಡುಮೂಡು—ಕೊಂಬು ಹುಟ್ಟು, ಅಧಿಕವಾಗು.

೬೩. ಇತ್ತ, ನೃಪನು ಅಂದು ಎಚ್ಚರೆ ಸತ್ತ (ಆ) ಆಡು, ಕಳಿಂಗ (ದೇಶ)ದಲ್ಲಿ ಕೋಣನ ಮೈಯನ್ನು ಪೆತ್ತಿರಲು, ಪರದನು (ಒಬ್ಬನು) (ಅದರ) ಬೆನ್ನು ಮುರಿಯುವಂತೆ ಹಿತ್ತಳೆಯನ್ನು ಹೇರಿ ತಂದು ಬಿಟ್ಟನು.

೬೩. ಎಚ್ಚರೆ—ಬಾಣದಿಂದ ಹೊಡೆದರೆ. ಪೆತ್ತಿರಲು—ಪಡೆದಿರಲು. ಪರದ—ವರ್ತಕ.

೬೪. (ಆ) ಲುಲಾಯವು, ನೀರಡಿಕೆಯಾಗಿ (ನೀರು) ಕುಡಿದು, ಸಿಂಪಾ (ನದಿಯ) ನೀರಿನಲ್ಲಿ ಅರ್ಧಮುಳುಗಿ, ಮುನ್ನೀರನ್ನು ನೀಲಾಚಲದಿಂದ ಸಾರಂಗಟ್ಟಿದ ಹಾಗೆ, ಬಳಲಿ ಮಗ್ಗುಲಾಗಿ ಬಿದ್ದಿತ್ತು.

೬೪. ಲುಲಾಯ—ಕೋಣ. ಮುನ್ನೀರು—ಸಮುದ್ರ. ಸಾರಂಗಟ್ಟು—ಕಟ್ಟೆಕಟ್ಟು.

೬೫. ಆ ಎಡೆಗೆ ಅರಸನ ಪಸಾಯಿತವಾದ ಜಾಯಿಲನು ನೀರುಣುವುದಕ್ಕಾಗಿ ಬರಲು, (ಕೋಣವು ತನ್ನ) ಕೋಡೆರಡನ್ನೂ (ಅದರ ಮೈಯಲ್ಲಿ) ಕೋದುಕೊಳ್ಳುವಂತೆ ಸೆಳೆದು, ಅಶ್ವಮಹಿಷನ್ಯಾಯವು ನಿಲ್ಲುವಂತೆ ಹಾಗೆ (ಅದನ್ನು) ಕೊಂದಿತು. ಆದನ್ನು ಅರಸು ಕೇಳಿ,

೬೬. 'ಕೋಣನ ಹೋರಾಟ ಕಡೆಯಲ್ಲಿ ಗಿಡಕ್ಕೆ ಮೃತ್ಯು' ಎಂಬ ರೀತಿಯಲ್ಲಿ, (ಆ ಕೋಣನ ಸ್ವಾಮಿಯಾದ) ಪರದನ ಬೀಡನ್ನು ಸಂಪೂರ್ಣವಾಗಿ ಸೂರೆಗೊಂಡು, ತನ್ನನ್ನೂ (ಎಂದರೆ ಕೋಣವನ್ನೂ) ಹಿಡಿತರಿಸಿ, ವಿಚಿತ್ರವಾದ ಕೊಲೆಯನ್ನು (ವಿಧಿಸಿ, ಆದನ್ನು) ಕೊಂದನು.

೬೭. (ಹೇಗೆಂದರೆ:) ಆಸನದಿಂದ ಬಾಯಿಂದ ಹೊಯ್ಸಾಸಿವೆ ಮೆಣಸು ಉಪ್ಪು ಕೂಡಿ, ನಿಲವಿನ ಸೂಡಿಂದ ಲೇಸಾಗಿ ಬೆಂದ ಬಾಡನ್ನು ಬಾಸಣಿಸಿ ಇಟ್ಟು; ಅದನ್ನೆ (ತಾಯಿಯಾದ) ಅಮೃತಮತಿಗೆ ಅಟ್ಟಿಸಿದನು.

೬೫. ಪಸಾಯಿತ—ಮೆಚ್ಚಿಕೆಗೆ ಪಾತ್ರವಾದ. ಜಾಯಿಲ—ಜಾತಿಕುದುರೆ.

ಅಶ್ವಮಹಿಷನ್ಯಾಯ—ಏನೋ ಗೊತ್ತಿಲ್ಲ. ೬೬. ಬೀಡು—ಮನೆಮಾರು. ೬೭. ಆಸನ—ಬಾಲದ ಹತ್ತಿರ ಹಿಂದಿನ ರಂಧ್ರ. ಸಿಲವಿನ ಸೂಡು—ಏರಿಳಿತಗಳಿಲ್ಲದೆ ಒಂದೇ ಸಮನಾದ ಕಾವು. ಬಾಡು—ಮಾಂಸ. ಬಾಸಣಿಸು—ವಸ್ತ್ರದಿಂದ ಮುಚ್ಚು.

೬೮. ಅದು ಸತ್ತು (ಅದರ ಮಾಂಸ) ಸವೆದರೆ, ಆ ಮಾಂಸದ ಸವಿಯನ್ನು ಕಂಡ ಅರಸಿ ಬಾಣಸಿನ ಮನೆಯಲ್ಲಿ ಕಟ್ಟಿದ ಹೋತವನ್ನು (ತಾನು) ತಿನ್ನುವ ಕುರಿಯಾಗಿ ಮಾಡಿದಳು. ಅದನ್ನು ಅರಿತಾಗ,(ಅಲ್ಲಿನ) ತೊತ್ತಿರು (ತಮ್ಮ)ತಮ್ಮಲ್ಲಿ (ಹೀಗೆ) ಎನ್ನುವರು:

೬೯. "ಮೈಯ ಕೀವೂ ರಸಿಕೆಯೂ ಬಸಿಯುತ್ತಿದೆ. ಒಡಲು ಅಳಿದುದಾದರೂ (ಇದನ್ನು) ಈ ನಾಯ ವ್ಯಸನಿಗತನವನ್ನು ತೊರೆದು ಬಿಡಳೇ! ಬೇಡವಾದಂಥ ಈ ಕಿಸುಗುಳಿಯನ್ನು ಒಯ್ಯಲು ಯಮನೂ ಏನು ಹೇಸಿದನೋ!

೭೦. "ಮದನನ ಮಾರಂಕದ ಚೆಂದದ ಗಂಡನನ್ನು, ಅಮೃತ ದಂತಹ ಅತ್ತೆಯನ್ನು ಇವಳು ಓವದೆ ಕೊಂದಳು. ಪಾಪವು (ಕೂಡ ಇವ ಳನ್ನು) ತಿನ್ನದು. ಪಾತಕಿ ಹುಳಿತರೆ ಅಲ್ಲದೆ ಸಾಯುವಳೇ!

೭೧. "(ಆ) ತೊನ್ನನ ಕೂಟದಿಂದ (ಇವಳಿಗೂ) ತೊನ್ನುರೋಗ ಆಯಿತು. 'ಈ ರೋಗಕ್ಕೆ ಬಾಡು (ಮತ್ತು) ಕಳ್ಳು (ಇವು) ವಿಷ' ಎಂದರೂ ಮಗನ ಮಾತನ್ನು ಮನ್ನಿಸಳೇ! ಈಕೆಗೆ ಇದೇನು ನಾಯಕ ನರಕ ಒಚ್ಚತವಾಯ್ತೋ!"

೬೮. ಬಾಣಸಿನ ಮನೆ—ಅಡುಗೆಮನೆ. ೬೯. ಒಡಲು—ದೇಹ. ಅಳಿ—ನಾಶವಾಗು. ನಾಯವ್ಯಸನಿಗತನ—ಹಾಳು ಚಟ. ಕಿಸುಗುಳಿ—ಕೀಳಾದವಳು. ಅಲ್ಪಳು. ೭೦. ಮಾರಂಕ—ಪ್ರತಿರೂಪ. ಓವದೆ—ವಿಶ್ವಾಸವಿಡದೆ. ೭೧. ಬಾಡು—ಮಾಂಸ. ಕಳ್ಳು—ಹೆಂಡ. ನಾಯಕ ನರಕ—ಘೋರನರಕ. ಒಚ್ಚತ—ಮನಸ್ಸಿಗೆ ಒಪ್ಪಿತ, ಇಷ್ಟ.

೭೨. ಎಂಬ ನುಡಿಯನ್ನು ಕೇಳಿಯೂ, ಓಪಳು (ಹಿಂದೆ ಆಗಿದ್ದ ವಳು) ಪಾಣ್ಬನನ್ನು ಕೂಡಿದ್ದ ಆ ನಣ್ಪನ್ನು ಕಂಡೂ, ಆ ಅಜಪೋತವು ತಮದಿಂದ ಬೆಂದು ಸತ್ತಿತು. (ಇದೇ ಕಾರಣವಲ್ಲದೆ,) ಅರ್ಧ ಕುಯಿದು ಉಂಡದ್ದರಿಂದ ನೊಂದು ಸಾಯಲಿಲ್ಲ.

೭೨. ಓಪಳು—ಪ್ರೇಯಸಿ. ಪಾಣ್ಬ—ಪರಸ್ತ್ರೀಯನ್ನು ಪಡೆಯುವವನು. ನಣ್ಪು—ನಂಟು. ತಮಸ್ಸು—ಅಜ್ಞಾನ.

೭೩. ಆ ರೌದ್ರವಾದ ಹತಿಗೆ ಸಂಸಾರವು ಮುಗಿಯಲು, ಹಾಗೆ (ಸತ್ತು) ಆ ಸೈರಿಭವೂ ಹೋತೂ ಆ ಪುರದ ಹೊರಗೆ, ಹೊಲಗೇರಿಯ ಮಾದರರ ಮನೆಯ ಕೋಳಿಯ ಬಸಿರಿನಲ್ಲಿ, ಹುಟ್ಟಿದುವು.

೭೪. ತುಂಬಾ ಏಳ್ಗೆಯುಳ್ಳ ಆ (ಕೋಳಿಯ) ಪಿಳ್ಳೆಗಳು ಎರಡನ್ನೂ ಅಲ್ಲಿಯ ಮಾದರನು ನೃಪನಿಗೆ ಇತ್ತು, ಓಲಗಿಸಿದನು. ಅರಸನು ಅವುಗಳನ್ನು ಚಂಡಕರ್ಮನಿಗೆ 'ನೀನು (ಇವುಗಳನ್ನು) ನೋಡಿ ಸಲಹು' ಎಂದು ಇತ್ತನು.

೭೩. ರೌದ್ರ—ರೋಷ. ಹತಿ—ಏಟು. ಸಂಸಾರ—ಇಹಲೋಕದ ಜೀವನ. ಸೈರಿಭ—ಕೋಣ. ಮಾದರ—ಹೊಲೆಯ. ೭೪. ಏಳ್ಗೆ—ಅಭಿವೃದ್ಧಿ. ಪಿಳ್ಳೆ—ಮರಿ.

೭೫. ಅಗ್ಗವಾದ ಸುವಸ್ತುವಿನ ಹಾಗೆ ಹುಂಜನು ಆ ಹೇಂಟೆಯೊಡನೆ ಸೇರಿ, ಬಿಸರುಹದ ಹಾಗೆ ಕೇಸರವನ್ನು ಆಂತಿತು; ಮೆಯ್ಗಲಿಯ ಹಾಗೆ ಆರಲು ಕೂರ್ಪು ಎಸೆಯಿತು; ತ್ಯಾಗಿಯಂತೆ ನೆರೆ ಕೊಟ್ಟು ಎಸೆದು ಒಪ್ಪಿತು; ರಾಧೆಯಂತೆ ಸಂಧಿಸಿ ಮುಡಿ ಮೇಲೆ ಕೊಂಕಿತು; ಚಂದ್ರಮನ ಹಾಗೆ ಸುಪಕ್ಷದಿಂದ ರಂಜಿಸಿತು.

೭೫. ಅಗ್ಗ—ಅರ್ಘ, ಬಹು ಬೆಲೆಯುಳ್ಳ. ಹುಂಜ—ಗಂಡುಕೋಳಿ. ಹೇಂಟೆ—ಹೆಣ್ಣುಕೋಳಿ. ಬಿಸರುಹ—ತಾವರೆ. ಕೇಸರ—ಹೂವಿನ ನಡುವೆ ಇರುವ ದಾರದಂತಹ ಎಳೆ; ಕೋಳಿಯ ಕೊರಳಲ್ಲಿ ಕೂಗಾಡುವ ಕುಚ್ಚು. ಮೆಯ್ಗಲಿ—ವೀರ. ಆರ್—ದನಿಯೆತ್ತಿ ಕೂಗು. ಕೂರ್ಪು—ಪರಾಕ್ರಮ ; ಕೋಳಿಯ ಕೂಗಿನ ಸಿಳ್ಳು. ನೆರೆ—ತುಂಬಾ. ಕೊಟ್ಟು—ದಾನ ಮಾಡತಕ್ಕಂತಹ ಗುಣ ; ಕೋಳಿಯ ತಲೆಯ ಮೇಲಿನ ಜುಟ್ಟು. ರಾಧೆ—ಕೃಷ್ಣನ ಪ್ರೇಯಸಿ. ಸಂಧಿಸಿ—ಸೇರಿಕೊಂಡು. ಮುಡಿ—ತಲೆಯ ತುರುಬು; ಕೋಳಿಯ ತಲೆ. ಪಕ್ಷ—ಚಂದ್ರನ ಶುಕ್ಲ ಕೃಷ್ಣ ಪಕ್ಷಗಳು; ಕೋಳಿಯ ಎರಡು ಪಕ್ಕದ ರೆಕ್ಕೆಗಳು.



(ಕವಿ ಹೇಳುತ್ತಾನೆ:)

೭೬. ಅಭಯರುಚಿಕುಮಾರನು ಹಿಂಸಾರಭಸಮತಿಯಾದ ಮಾರಿದತ್ತನಿಗೆ ಸೈಪನ್ನು ಹೇಳಿ, ಧರ್ಮಕ್ಕೆ (ಅವನನ್ನು) ತಂದ ಈ ಶುಭ ಕಥನವನ್ನು ಅತಿಯಾದ ಆನಂದದಿಂದ ಕೇಳುವ ಭವ್ಯಪ್ರಭುಸಭೆಗೆ ಮಂಗಲವಾದ ಶ್ರೀವಿಲಾಸವು ಎಸೆದಿರುವುದು.

೭೬. ಮೊದಲನೆಯ ಅವತಾರದ ಕಡೆಯ ಪದ್ಯದ ಕೆಳಗೆ ನೋಡಿ.

# ನಾಲ್ಕನೆಯ ಅವತಾರ

[ಅಭಯರುಚಿ ಮುಂದೆ ಹೇಳುತ್ತಾನೆ:]

೧. ರತಿಯೊಡನೆ ಮನಸಿಜನು ವನದ ಅತಿಶಯವನ್ನು ನೋಡಲೆಂದು ಬರುವ ಹಾಗೆ, ಉನ್ನತವಾದ ಪೀತಚ್ಛತ್ರವೆಂಬ ನಂದನ(ವನ್ನು ಪಡೆದವ) ನಾದ ಯಶೋಮತಿ (ತನ್ನ ಪತ್ನಿಯಾದ) ಕುಸುಮಾವಳಿಯೊಡನೆ ನಡೆತಂದನು.

೧. ಮನಸಿಜ—ಮನ್ಮಥ. ಉನ್ನತ—ಎತ್ತರವಾದ. ಪೀತಚ್ಛತ್ರ—ಹೊಂಬಣ್ಣದ ಕೊಡೆ. ನಂದನ—ಆನಂದವನ್ನು ಕೊಡುವ ನೆರಳಿನ ತೋಟ.

೨. ಎಲೆ ಸುಲಿದ ಎಡೆಗಳ ಕಣ್‌ಕಣ್ಣಿಗೆ ಎಲೆಯ ಎಡೆ ಗಂಟು ಒಡೆದು ಮೊನಸಿ ನನೆಯನ್ನು ತೋರಿ ಮುಗುಳುಬಿಟ್ಟು ಅಲರಿ, ಅಲ್ಲಿ ಹೊಸ ಮಲ್ಲಿಗೆಗಳು ಮರಿದುಂಬಿಗೂ ತೆಂಕಣ ಎಲರಿಗೂ ಮುದ್ದಾದುವು.

೨. ಎಡೆ—ಸ್ಥಾನ. ಕಣ್—ಗಿಣ್ಣು. ಮೊನಸು—ಮೊಗ್ಗಿನ ಪೂರ್ವಸ್ಥಿತಿ. ನನೆ—ಮೊಗ್ಗು. ಅಲರು—ಹೂ. ಎಲರು—ಗಾಳಿ.

೩. ಕೊಳದಲ್ಲಿ ಓಲಾಡಿ, ತಳಿರಿದ ಎಳಮಾವಿನಲ್ಲಿ ಉಯ್ಯಾಲೆಯಾಡಿ, ನರಪತಿ(ಯಾದ ಯಶೋಮತಿ) ಕುಸುಮಾವಳಿಯಲ್ಲಿ ರತಿರಾಗದಿಂದ ಓಕುಳಿಯಾಡಿ, ವಿಲಾಸಗೋಷ್ಠಿಯಲ್ಲಿ ಕುಳಿತಿದ್ದನು.

೩. ಓಲಾಡು—ಓಡಿಯಾಡು. ತಳಿರಿದ—ಚಿಗುರು ಬಿಟ್ಟ.

೪. (ಆಗ) ಗರಟಿಗೆಗಾಗಿ ಇತ್ತ ಆ ವನಪರಿಸರದಲ್ಲಿ ಬರುತ್ತ ಇದ್ದ ಅಕಂಪನರೆಂಬವರು (ಆ ತೋಟದಲ್ಲಿ) ತರುಮೂಲದಲ್ಲಿರಲು, ಕುರುಡನು ನಿಧಿಯನ್ನು ಕಾಣುವಂತೆ ಚಂಡಕರ್ಮನು (ಅವರನ್ನು) ಕಂಡನು.

೪. ಗರಟಿಗೆ—ದಿನಪದ್ಧತಿಯ ಸಂಚಾರ. ವನಪರಿಸರ—ತೋಟದ ಸುತ್ತು ಮುತ್ತು. ಅಕಂಪನ—ನಡುಕವಿಲ್ಲದ, ನಿರ್ಭೀತರಾದ. ತರುಮೂಲ—ಮರದ ಬುಡ.

೫. ಮನಸ್ಸು ಹುಬ್ಬಿನ ಮೊದಲಲ್ಲಿ ಇರಲು, ವಾಯು ಮನಸ್ಸಿನ ಒಳಗೆ ಇರಲು, ಕರಣತತಿ ವಾಯುವಿನಲ್ಲಿ ಕುನಿದಿರಲು, ತನುವು

ಪದ್ಮಾಸನದಲ್ಲಿ ಇರಲು, (ಆ) ಯೋಗೀಂದ್ರನು ಆತ್ಮಚಿಂತೆಯಲ್ಲಿ ಇದ್ದನು.

೫. ಕರಣತತಿ—ಇಂದ್ರಿಯಗಳ ಗುಂಪು. ಕುಸಿ—ಅಡಗು, ಸೇರಿಹೋಗು.

೬. ದೀಪದ ಬತ್ತಿಯು ನಿಧಿಯನ್ನು ಕಂಡೊಡನೆ ಒಲಿದು ಎರಗುವ ತೆರದಿಂದ, ಆತನು (ಆ ಚಂಡಕರ್ಮನು) ಗೌರವ (ಎಂಬುದು ಏಕೆಂದು) ಅರಿಯದೆಯೂ (ಅವರಿಗೆ) ಎರಗಿದನು. ಮುನಿ ಕಣ್‌ತೆರೆದು, ಒಯ್ಯನೆ ನೋಡಿ ಹರಸಲು; ಬಳಿಕ (ಚಂಡಕರ್ಮನು) ಇಂತೆಂದನು:

೭. "ಎಲೆ ದೇವರೆ! ಹುತ್ತವೂ ಬತ್ತಲೆಯೂ ಬರಿದಾಗಿ (ಇರುವುದು) ಇಲ್ಲ ಎನ್ನುತ್ತಾರೆ. ಆದ ಕಾರಣದಿಂದ, ನೆಲೆಯಾದ ಆಂದೆಯನು ಅಚ್ಚಿದ ಹಾಗೆ, ಎಲಾ, ಮಿಡುಕದೆ ಮನದಲ್ಲಿ ಏನನ್ನು ನೆನೆಯುತ್ತಿದ್ದಿರಿ?"

೭. ನೆಲೆಯಾದ—ಚಲನೆಯಿಲ್ಲದೆ ಸ್ಥಿರವಾದ. ಆಂದೆಯು—ಒಂದು ಬಗೆಯ ಗೂಟೆ. ಅಚ್ಚು—ಅಲ್ಲಾಡದೆ ಇರು ಎಂದಿರಬಹುದು. ಮಿಡುಕು—ಅಲುಗಾಡು.

೮. (ಎಂಬುದಾಗಿ ಅವನು) ಕೇಳಲು, (ಮುನಿಯು ಅದನ್ನು) ಅವಧಾರಿಸಿ, (ಅವನು) ಆಸನ್ನಭವ್ಯನು ಎಂಬುದನ್ನು ಅವಧಿಯಿಂದ ಅರಿತು, ಅವರು ಇಂತು ನುಡಿದರು: "ಆತ್ಮನನ್ನು ಅವಿಕಲ್ಪವಾಗಿ ನೆನೆಯುತ್ತಿದ್ದೆವು" ಎನ್ನಲು; ಮತ್ತೆ ಆತನು (ಆ ಚಂಡಕರ್ಮನು)—

೯. "ಆತ್ಮನು ಆವ ಎಡೆಯಲ್ಲಿ ಇದ್ದಾನೆ?(ಆತ್ಮನಿಗೆ)ಯಾವುದು ಗುರುತು?" ಎಂದರೆ; (ಆ ಮುನಿಯು) "ಅಂಗಿಯು ಅಂಗದಲ್ಲಿ ಎಲ್ಲಾ ತೀವಿರುವನು. ಭೂತಚತುಷ್ಟಯದ ಅವಯವದಿಂದ ಆತ್ಮನು ಅನ್ಯನು. (ಆತ್ಮನು) ಅತಿಚೈತನ್ಯನು."

೮. ಅವಧಾರಿಸು—ಗಮನಿಸು. ಆಸನ್ನ ಭವ್ಯ—ಭವ್ಯತೆಗೆ ಹತ್ತಿರ ಬಂದವನು; ಧರ್ಮದಲ್ಲಿ ಅನುರಾಗವುಂಟಾದವನು. ಅವಧಿ—ದಿವ್ಯಜ್ಞಾನ. ಅವಿಕಲ್ಪ—ಸಂಪೂರ್ಣ. ೯. ಅಂಗಿ—ಆತ್ಮ. ಅಂಗ—ದೇಹ. ತೀವಿರು—ತುಂಬಿರು. ಭೂತಚತುಷ್ಟಯದ ಅವಯವ—ಪೃಥ್ವಿ, ಅಪ್, ತೇಜಸ್ಸು, ಆಕಾಶ ಎಂಬ ನಾಲ್ಕು ಭೂತಗಳಿಂದ ಆದ ದೇಹ. ಅನ್ಯ—ಬೇರೆ.

೧೦. ಎಂದರೆ; ತಳಾರನಾಯಕನು ಎಂದನು: "ನೀವು ಎಂದ ಮಾತು ಪೊಲ್ಲದು. ನೋಡುವುದಕ್ಕೆ ಎಂದು ಹಲವರನ್ನು ವಿಚಾರಿಸಿಕೊಂಡೆ. ತನುವಲ್ಲದೆ ಆತ್ಮನನ್ನು ಕಂಡು ಅರಿಯೆನು.

೧೧. "(ದೇಹವನ್ನು) ಕಿರಿದುಕಿರಿದಾಗಿ ಕಡಿದು, ಎಲುಬನ್ನು ಪುಡಿಗುಟ್ಟಿಸಿ, ತೊಗಲನ್ನು ಉಗಿದು, ಕರುಳ ತೊಡಕನ್ನು ಬಿಡಿಸಿ ದೀರ್ಘವಾಗಿ ನೋಡುತ್ತೇನೆ—ಒಳಗೆ ಎಲ್ಲಿ ಅಡಗಿದೆ ಜೀವ? ಇರುವುದಾದರೆ, (ಆ ಜೀವನು) ಎಲ್ಲಿಗೆ ಹೋದನು?

೧೨. ಕುದಿರಿನಲ್ಲಿ ಕಳ್ಳನನ್ನು ಇಕ್ಕಿಸಿ, ಸುಧೆಯನ್ನು (ಸುತ್ತಲೂ) ಬಳಿದು (ದೇಹವನ್ನು ಅದರೊಳಗೆ) ಇಟ್ಟರೆ, ಬಳಿಕ ತೆರೆದು ಒಳಗನ್ನು ನೋಡಿದೆನು—ಆತ್ಮನು ಇಲ್ಲ! ತನು (ಮಾತ್ರ) ಇದೆ! (ತನುವಿನಿಂದ) ಬೇರೆ ಎಂಬ ಆತ್ಮನನ್ನು ನೆಲವು ನುಂಗಿತೋ?

೧೩. "ತೊಲೆಯಲ್ಲಿ ತೂಗಿಸಿ, ಬಾಯನ್ನೂ ಮೂಗನ್ನೂ ಅಡೆದು ಒತ್ತಿ ಕೊಂದ ಕಳ್ಳನ ದೇಹವು, ತೂಗಿದರೆ ಕುಂದದು. (ಆದಕಾರಣ) ಆತ್ಮವೆಂಬ ವಿಭಾಗವು ಬೇರೆಯಿಲ್ಲ. ಜೀವನೇ ಹೇಗೂ ದೇಹ.

೧೦. ತಳಾರ—ತಳವಾರ. ಪೊಲ್ಲದು—ಸರಿಯಲ್ಲದ್ದು. ತನು—ದೇಹ. ೧೧. ಉಗಿ—ಸೀಳು. ೧೨. ಕುದಿರು—ಕಣಜ, ಧಾನ್ಯ ತುಂಬುವ ಹಗೇವು. ಸುಧೆ—ಸುಣ್ಣ. ೧೩. ತೊಲೆ—ತಕ್ಕಡಿ. ಅಡೆ—ತುಂಬಿ ಮುಚ್ಚು.

೧೪. (ಎಂದು ಚಂಡಕರ್ಮನು)ಎಂದರೆ; ವಿಮೋಹವೆಂಬ ಮೃಗವನ್ನು ಮಿಥ್ಯೆಯೆಂಬ ಕಂದರದಲ್ಲಿ ಬೆದರಿಸಿ ಅಟ್ಟುವ ದುಂದುಭಿರವದ ಹಾಗೆ (ಅವರ) ಗಂಭೀರ ರವವು ಒಗೆಯಲು, ಗುರುಗಳು (ಆ) ದಂಡಧರನಿಗೆ ಇಂತೆಂದರು:

೧೫. "ತರಿದರೆ, ಕಡಿದರೆ, ಸೀಳಿದರೆ, ಕಿಚ್ಚು ಕಾಷ್ಠದಿಂದ ಪೊರಮಡುವುದೆ? ಹೊಸೆದ ಒಡನೆ ಪೊರಮಡುವುದು. ಹಾಗೆಯೇ, ವಿವೇಕಕ್ರಿಯೆಯಿಂದ ಜೀವವು ಒಡಲಿನಿಂದ ಬೇರೆಯಾಗಿ ತೋರುವುದು.

೧೬. "ಕುದಿರಿನಲ್ಲಿ ಇದ್ದು ಊದಿದ ಶಂಖದ ಧ್ವನಿ, (ಕುದಿರು) ಛಿದ್ರವಿಲ್ಲದುದಾದರೂ, ಹೊಮ್ಮುವುದಿಲ್ಲವೆ? ಹೊಮ್ಮಿದ ನಾದವು ಶಂಖದಿಂದ ಬೇರೆಯಲ್ಲವೇನು? (ಅದರಂತೆ) ಜೀವನೂ ಕಾಯದಿಂದ ಅನ್ಯನಾದವನು.

೧೭. "(ಗಾಳಿ) ತೀವಿದ ತಿದಿಯನ್ನು ತೂಗಿಯೂ, ಆ ಗಾಳಿಯನ್ನು ಇಳಿಸಿ ತೂಗಿಯೂ (ನೋಡಿದರೆ), ಸರಿಯಾಗಿ ತಿದಿಯಿಂದ ಆ

ವಾಯು ಬೇರೆ. (ಹಾಗೆಯೇ) ತನುವಿನಿಂದ ಜೀವವು ಬೇರೆ ಎಂದು, ಮಗನೆ, ಭಾವಿಸಿ ನೋಡು.

೧೮. "ಕಲ್ಲಲ್ಲಿ ಹೊನ್ನು, ಹಾಲಿನಲ್ಲಿ ಘೃತ, ಇಲ್ಲ ಎನ್ನಬೇಡ; ಉಂಟು. ದೇಹದೊಳಗೆ ಆತ್ಮನು ಅದೇಕೆ ಇಲ್ಲ! ಕುರುಡನಿಗೆ ತೋರದಿದ್ದರೆ ವಸ್ತು ಇಲ್ಲವಾಗುವುದೆ? ಭೇದಿಸುವವನಿಗೆ ಆತ್ಮನು ಇದ್ದಾನೆ.

೧೯. "ಅಘವೆಂಬ ಜಲಧಿಯಲ್ಲಿ ಓಲಾಡುವುದಾದರೂ, ಗುಣ ಗಣದಲ್ಲಿ ಕೂಡುವುದಾದರೂ, ಜನ್ಮಜಲಧಿಯನ್ನು ದಾಟುವುದಾದರೂ, ಮಾಡುವವನು ಆತ್ಮ; ಮಾಡಿದುದನ್ನು ನೆಟ್ಟನೆ ಉಣುವಾತನು ಆತ್ಮ.

೨೦. "ಪರಮಾತ್ಮನು ಎಂಥವನು ಎಂದರೆ—ಚರಮಾಂಗಪ್ರಮಿತನು, ಅಖಿಲಲೋಕಸಮಾನನು, ಅವಯವವಿಲ್ಲದವನು, ನಿತ್ಯನು, ದುರಿತವಿಲ್ಲದವನು, ಅನಂತಪ್ರಬೋಧದರ್ಶನ ಸುಖಗಳುಳ್ಳವನು.

೨೧. "ಕೇವಲವಿಬೋಧನೇತ್ರನೆ ದೇವನೆ ಪರಮಾತ್ಮನು. ಆತನ ವಚನವು ಆಗಮವು. ಜೀವದಯೆ ಧರ್ಮ.—ಎಂಬ ಈ ಭಾವನೆಯನ್ನು ನೆರೆಯೆ ನಂಬುವುದು ಸಮ್ಯಕ್ತ್ವ.

೨೨. "ಪರತ್ರಿಯನ್ನು ಬಯಸುವವನು ಕೊಲ್ಲಲೂ ಹುಸಿಯಲೂ ಆಗದು. ಹೆರವರ ಹೆಂಡಿರಲ್ಲಿ ಸಲಲು ಆಗದು. ಕಳವನ್ನು ಸ್ವಲ್ಪವೂ ಕಳಲಾಗದು. ತೀರದುದಕ್ಕೆ ಅಲವರಲು ಆಗದು.

೨೩. "ಇವು ಮೊತ್ತಮೊದಲಿನ ಅಣುವ್ರತಗಳು. ಇವು ಮಸುಳದ ಹಾಗೆ ನಡೆದರೆ, (ಅವನು) ಐಹಿಕ ಆಮುತ್ರಿಕ ಎಂಬ ಇವರಲ್ಲಿ ಸಮವಾದ ಸುಖವುಳ್ಳವನಾಗುವನು. ಇವು ಮಸುಳಿದ ಆತನು ಭವಭವದಲ್ಲೂ ದುಃಖಿಯಾಗುವನು.

೨೪. "ಮಾಡಿದ (ಹಿಟ್ಟಿನ) ಕೋಳಿಯನ್ನು ಅಳಿದು, ಯಶೋಧರನು ಚಂದ್ರಮತಿಯು ಹೀಗೆ ಇಬ್ಬರು ಆರ್ಕಾಡಿ, ನೋಡೈ, ಮತ್ತೊಮ್ಮೆ ತಿರ್ಯಗ್ಗತಿಯಲ್ಲಿ ಬಳಲಿ ಗೂಡಿನ ಕೋಳಿಗಳಾದರು.

೨೫. "(ಮೊದಲನೆಯ) ವ್ರತಕ್ಕೆ ಹಾನಿಯಾದ ಹಿಂಸೆಯೊಂದು ಈ ಗತಿಗೆ ಇಕ್ಕಿತು. ಉಳಿದ ನಾಲ್ಕೂ ಆದರೆ, ಬಳಿಕ, ಏನು? (ಹೇಗೆಂದರೆ)

ಶೂರನಾದ ಪ್ರತಿಪಕ್ಷದವನು ಚತುರಂಗಬಲ ಸಮೇತನಾದರೆ, ಏನು (ತಾನೇ) ಮಾಡನು?

೨೬. "ಆದರಿಂದ, ಹೆರವರನ್ನು ತನ್ನಂತೆಯೆ ಬಗೆಯುವುದು. ಪ್ರಾಣಿಹಿಂಸೆಯನ್ನು ಮಾಡಬೇಡ. ದಯೆಯನ್ನು ಮೂಲವಾಗಿ ಉಳ್ಳದ್ದು ಧರ್ಮ. ಪದುಳಿಸಿ ಕೇಳು, ಮಗನೆ. ಇದು ಉಭಯ ಭವಕ್ಕೂ ಹಿತ."

೧೪. ವಿಮೋಹ — ವಿಶೇಷವಾದ ಮೌಢ್ಯ. ಮಿಥ್ಯೆ — ತಪ್ಪು ತಿಳಿವಳಿಕೆ. ಕಂದರ—ಗುಹೆ. ೧೫. ಕಿಚ್ಚು—ಬೆಂಕಿ. ಕಾಷ್ಠ—ಕಟ್ಟಿಗೆ. ಪೊರಮಡು—ಹೊರಗೆ ಬಾ, ಕಾಣಿಸಿಕೊ. ವಿವೇಕಕ್ರಿಯೆ—ಬೇರ್ಪಡಿಸುವ ಕೆಲಸ. ಒಡಲು—ದೇಹ. ೧೬. ಕುದಿರು—ಕಣಜ. ಛಿದ್ರ—ಬಿರುಕು. ಕಾಯ—ದೇಹ. ೧೭. ತೀವು—ತುಂಬು. ೧೮. ಘೃತ—ತುಪ್ಪ. ಭೇದಿಸು—ವಿಂಗಡಿಸಿ ಬೇರ್ಪಡಿಸಿ ನೋಡು. ೧೯. ಅಘ—ಪಾಪ. ಜಲಧಿ—ಸಮುದ್ರ. ಓಲಾಡು—ಸುಲಭವಾಗಿ ಓಡಿಯಾಡು. ಉಣು—ಅನುಭವಿಸು. ೨೦. ಚರಮಾಂಗ ಪ್ರಮಿತನು—ಕಟ್ಟ ಕಡೆಯ ದೇಹವನ್ನು ಅಳತೆಯಾಗಿ ಉಳ್ಳವನು; ಎಂದರೆ ಮುಕ್ತವಾದ ದೇಹವುಳ್ಳವನು. ಅಖಿಲಲೋಕಸಮಾನನು—ಎಲ್ಲಾ ಲೋಕಗಳಲ್ಲಿಯೂ ಸಮಾನವಾದ ವಿರಕ್ತಿಯುಳ್ಳವನು, ಯಾವ ಲೋಕದ ಮೇಲೆಯೂ ಆಸಕ್ತಿಯಿಲ್ಲದವನು. ಅವಯವವಿಲ್ಲದ—ನಿರಾಕಾರನಾದ. ದುರಿತ—ಪಾಪ. ಅನಂತಜ್ಞಾನ, ಅನಂತದರ್ಶನ, ಅನಂತಸುಖ ಇವು ಆತ್ಮನ ನಾಲ್ಕು ಅನಂತಗುಣಗಳಲ್ಲಿ ಮೂರು. ಏಕೋ ಇಲ್ಲಿ ನಾಲ್ಕನೆಯದಾದ ಅನಂತವೀರ್ಯ ಬಿಟ್ಟು ಹೋಗಿದೆ. ೨೧. ಕೇವಲ ವಿಬೋಧನೇತ್ರನು—ಕೇವಲಜ್ಞಾನ, ಕೇವಲದೃಷ್ಟಿ ಇವುಗಳನ್ನು ಉಳ್ಳವನು. ಇಂತಹದನ್ನು ಉಳ್ಳ ದೇವ—ತೀರ್ಥಂಕರ. ತೀರ್ಥಂಕರರ ಮಾತಿಗೆ ಆಗಮ ಎಂದು ಹೆಸರು. ಸಮ್ಯಕ್ತ್ವ—ಜೈನ ಧರ್ಮದ ಸಾರದಲ್ಲಿ ನಂಬಿಕೆ. ೨೨. ಪರತ್ರೆ—ಪರಲೋಕ, ಮೋಕ್ಷ. ಹುಸಿ—ಸುಳ್ಳಾಡು. ಅಲವರು—ಪೇಚಾಡು, ಹಂಬಲಿಸು. ೨೩. ಅಣುವ್ರತ—ಸಣ್ಣ ವ್ರತ. ಮುಸುಳು—ಮಾಸು, ಕುಂದು. ಆಮುತ್ರಿಕ—ಪಾರಲೌಕಿಕ. ಭವ—ಜನ್ಮ. ೨೪. ಅಳಿ—ನಾಶಮಾಡು. ಅರ್ಕಾಡು—ನಾಶವಾಗು. ತಿರ್ಯಗ್ಗತಿ—ಮೃಗಜಾತಿ. ೨೬. ಬಗೆ—ಭಾವಿಸು. ಪದುಳಿಸು—ನೆಮ್ಮದಿಯಾಗು, ಸಮಾಧಾನವಾಗು. ಉಭಯಭವ—ಇಹದಲ್ಲಿ ಪರದಲ್ಲಿ ಜನ್ಮ.

೨೭. ಗುರುವು ಇಂತು ಬೆಸಸಲು, ಜಾತಿಸ್ಮರಗಳಾಗಿದ್ದ ಹಕ್ಕಿಗಳು (ಅವರು ಹೇಳಿದುದನ್ನು) ಕೇಳಿ, ಎದೆಯಲ್ಲಿ ಪರಮೋತ್ಸವದಿಂದ ವ್ರತವನ್ನು ಧರಿಯಿಸುತ್ತಿರಲು, (ಆ ಜೀವದಯಾವ್ರತವನ್ನು) ಚಂಡಕರ್ಮನೂ ಧರಿಯಿಸಿದನು.

೨೭. ಜಾತಿಸ್ಮರ—ಹಿಂದಿನ ಜನ್ಮವನ್ನು ಸ್ಮರಿಸಿಕೊಂಡದ್ದು.

೨೮. ನಿಜಹರ್ಷ(ದಿಂದ ಜನಿಸಿದ) ಬಾಷ್ಪದ ಮಳೆಯ ಹನಿ ಕಳಚಿಕೊಳ್ಳಲು, ಧರ್ಮದ ಮೇಲಿನ ಅನುರಾಗವೆಂಬ ಮುಗಿಲುಗಳು ಮೊಳಗಿದುವು ಎಂಬಂತೆ (ಆ ಕೋಳಿಗಳು) ಸೊಂಪಿನ ಪೊಂಪುಳಿಯಿಂದ ಕೂಗಲಾಗಿ—ಇತ್ತ ನೃಪಾಲನು (ಅದನ್ನು) ಕೇಳಿ,

೨೯. (ತನ್ನ) ಸ್ವರವೇದ ವಿದ್ಯೆಯನ್ನು ತನ್ನ ಅರಸಿಗೆ ಮೆರೆಯುವುದಕ್ಕಾಗಿ 'ದೇವಿ, ನೋಡು!' ಎನುತ್ತಾ ಎಚ್ಚನು. ಸರಲು ಎಯ್ದಿಇಸಲು, ಅಂತು ಅವು ಎರಡಕ್ಕೆ ಆಯುಃಪ್ರಮಾಣವು ಒಂದಾದುದು ಎನ್ನುವಂತೆ, (ಎರಡೂ) ಕೆಡೆದುವು.

೨೮. ನಿಜಹರ್ಷ—ತನುಗೆ ಆದ ಹರ್ಷ. ಬಾಷ್ಪ—ಕಣ್ಣೀರು. ಪೊಂಪುಳಿ—ಆಧಿಕ್ಯ, ಹೆಚ್ಚಿಗೆ. ೨೯. ಸ್ವರವೇದವಿದ್ಯೆ—ಧ್ವನಿಯನ್ನು ಕೇಳಿಯೇ ಧ್ವನಿಮಾಡಿದ ಪ್ರಾಣಿಯನ್ನು ಹೊಡೆದು ಬೀಳಿಸುವ ವಿದ್ಯೆ. ಸರಲು—ಬಾಣ. ಇಸು—ತಾಗು. ಕೆಡೆ—ಬೀಳು.

೩೦. (ಹೀಗೆ) ಸಮಾಧಿಮರಣವು ದೊರೆಕೊಳ್ಳಲು, (ಆ) ಚರಣಾಯುಧಯುಗಳವು ಅಳಿದು, ಕುಸುಮಾವಳಿಯೆಂಬ ಅರಸಿಯ ಬಸಿರಲ್ಲಿ, ನಚ್ಚನ್ನು ಅಚ್ಚೊತ್ತಿದ ಹಾಗೆ, ನರಯುಗಳಕವಾಗಿ ಬಂದುವು.

೩೧. ಅಭಯರುಚಿ ಅಭಯಮತಿ ಎಂಬ ಅಭಿಧಾನದಿಂದ (ಆ) ಚಂದ್ರಮತಿ ಯಶೋಧರರು, (ಈಗ) ಅವಳಿಗಳು (ಆದವರು), ಶುಭ ಲಕ್ಷಣವು ಒಪ್ಪುತ್ತಿರಲು, ಸ್ವಭಾವಸಿದ್ಧಗಳಾಗಿ ಬಳೆಯುತ್ತಿದ್ದರು.

೩೦. ಸಮಾಧಿ ಮರಣ—ಧರ್ಮದಲ್ಲಿ ಮನಸ್ಸು ನೆಲಸಿರುವಾಗ ಸಂಭವಿಸುವ ಸಾವು. ದೊರೆಕೊಳ್ಳು—ಸಂಭವಿಸು. ಚರಣಾಯುಧ—ಕೋಳಿ. ಯುಗಳ—ಜೋಡಿ. ನಚ್ಚು—ಪ್ರೀತಿ. ಅಚ್ಚೊತ್ತು—ಮೂಲವನ್ನು ತದ್ವತ್ತಾಗಿ ಪ್ರತಿಮಾಡು. ನರಯುಗಳಕ—ಎರಡು ಮನುಷ್ಯರೂಪು. ೩೧. ಅಭಿಧಾನ—ಹೆಸರು.

೩೨. ನುಣುಪಾದ ಕುರುಳಿನ ಹೊಳೆಯುವ ಕಪ್ಪು ಕಣ್ಣಿಗೆ ಅಗ್ಗಳವಾದ ಮೈಯ ಬೆಳಗೂ ಎಸೆಯುತ್ತಿರಲು, ಆ ಹೆಣ್ಣು ಗಂಡು ರಾಜ್ಯಲಕ್ಷ್ಮಿಯ ಕಣ್ಣುಗಳಿಗೆ ಒಪ್ಪುವಂತೆ ಸಮನಾಗಿ ಬೆಳೆಯುತ್ತಿರಲು; ಇತ್ತ—

೩೩. ಯಶೋಮತಿಯು ಬೇಟೆಗೆ ನಡೆಯಲು; ದೂರದಲ್ಲಿ ಆರಣ್ಯವಾಸಿಗಳು ನಿಲ್ಲಲು (ಅವರನ್ನು) ಕಂಡು, ಆ ಬೇಟೆ ಹರಿಯ

ದಿರಲು, 'ಈ ಶ್ರಮಣನು ವಿನೋದದ ಕಂಟಕನು' ಎಂದು ಬರುತ್ತಾ ಮುನಿದನು.

೩೨. ಕುರುಳು—ತಲೆಗೂದಲು. ಅಗ್ಗಳ—ಅಧಿಕ, ಅಮೂಲ್ಯ. ೩೩. ಶ್ರಮಣ—ಜೈನಸಂನ್ಯಾಸಿ. ಕಂಟಕ—ಅಡ್ಡಿ. ಮುನಿ—ಕೋಪಿಸಿಕೊ.

೩೪. ಮುನಿದು, ಆಯ್‌ನೂರು ಕುನ್ನಿಗಳಷ್ಟನ್ನೂ ಒಮ್ಮೊದಲೇ ತೋರಿ 'ಕೊಳ್ ಕೊಳ್' ಎಂದು ಬಿಡಲು; ಮಹಾಮುನಿಯು ತಳರದೆ ಮೇರುವಿನ ಹಾಗೆ (ಸ್ಥಿರವಾಗಿ) ಇರಲು, ನಾಯಿಗಳು ವನಮೃಗದ ಹಾಗೆ ಉಕ್ಕನ್ನು ಉಳಿದು (ಆತನ ಸುತ್ತ) ಸುಳಿದುವು.

೩೪. ಕುನ್ನಿ—ನಾಯಿ. ಕೊಳ್—ಹಿಡಿದುಕೊ. ತಳರು—ಹೊರಡು. ವನಮೃಗ—ಕಾಡಿನ ಜಿಂಕೆ. ಉಕ್ಕು—ಪರಾಕ್ರಮ.

೩೫. ಆ ಯತಿಗೆ (ಅವನ ಪ್ರಭಾವಕ್ಕೆ) ಕೌಳೇಯಕತತಿಯು ಆಯತಿ ಕೆಡಲು, ನೃಪತಿ ಕೆಳರ್ದು, ಮುಳಿದು, ಉಚ್ಚಿದ ಕೌಕ್ಷೇಯಕದಿಂದ ಹೊಯ್ಯಬೇಕೆಂದು ಐದಲು; ವಿನೇಯನಾದ ಕಲ್ಯಾಣಮಿತ್ರನೆಂಬ ಪರದನು (ಹೀಗೆಂದನು:)

೩೬. "ಕೆಮ್ಮನೆ ಬಾಳನ್ನು ಕಿತ್ತೆ. 'ಕಿಂ ಮಿತ್ರಂ? ಯಂ ನಿವರ್ತಯತಿ ಪಾಪಾತ್' ಎಂದು ನಾನು ಮಾಣಿಸದಿದ್ದರೆ, ದೇವ, ನಿನಗೆ ದುರಿತಶತಗಳು ಕೋಟಲೆಯನ್ನು ಮಾಡವೆ?

೩೭. "ಪೊಡಮಡಲು ಎತ್ತುವ ಕೈಗಳು ಹೊಡೆಯಲಿಕ್ಕೆ ಎತ್ತಬಹುದೆ? ಮೂರುಲೋಕದ ಕೈಗನ್ನಡಿ, ಸಾಮರ್ಥ್ಯದ ಸದ್ಗುಣದ ಒಡೆಯರಲ್ಲಿ ಅದು ತಕ್ಕುದಲ್ಲ. ಬಾಳನ್ನು ಅತ್ತ ಇಡು.

೩೮. "ಆ ಋಷಿಯ ಚರಣಕಮಲವನ್ನು ಆರಾಧಿಸಲೆಂದು ಬಂದು ಕಂಡು, ಎಡೆಯಲ್ಲಿ ಹೊಕ್ಕು, ಹೇ ಉರ್ವೀರಮಣ, 'ದುರ್ಬಲಸ್ಯ ಬಲೋ ರಾಜಾ' ಎನ್ನದೆ, ಇವರಿಗೆ ಮುಳಿಯುವುದೆ, ಮರುಳೇ!

೩೯. "ನೀನು ಇವರು ಯಾರೆಂದು (ತಿಳಿದು) ಇರುವೆ? (ಇವರು) ಭುವನತ್ರಯಕ್ಕೆ ತಿಳಕರು, ಅಮಲವಾದ ಸದ್‌ಬೋಧವೆಂಬ ಸುಧಾರ್ಣವಕ್ಕೆ ಪೂರ್ಣಚಂದ್ರನಂಥವರು, ಅವನತರಾದ ದಿವಿಜ ನರ ಉರಗರನ್ನು ಉಳ್ಳವರು, ಅನನ್ಯಸಾಮಾನ್ಯವಾದ ಗುಣವುಳ್ಳವರು.

೩೫. ಕೌಳೇಯಕ ತತಿ—ನಾಯಿಗಳ ಗುಂಪು. ಆಯತಿ—ಬಲ, ಶಕ್ತಿ. ಕೆಳರು—ಕೆರಳು, ರೇಗು. ಉಚ್ಚು—ಒರೆಯಿಂದ ಕೀಳು. ಕೌಕ್ಷೇಯಕ—ಕತ್ತಿ. ಐದು—ಹತ್ತಿರ ಹೋಗು. ವಿನೇಯ—ವಿನಯಶಾಲಿ. ಪರದ—ವ್ಯಾಪಾರಿ. ೩೬. ಕೆಮ್ಮನೆ—ವ್ಯರ್ಥವಾಗಿ. ಬಾಳು—ಕತ್ತಿ. ಕಿಂ ಮಿತ್ರಂ—ಸ್ನೇಹಿತನು ಯಾರು? ಯಂ ನಿವರ್ತಯತಿ ಪಾಪಾತ್—ಪಾಪದಿಂದ ಯಾವನು ತಡೆದು ತಿರುಗಿ ಸುವನೋ ಅವನು. ಮಾಣಿಸು—ತಡೆ. ದುರಿತಶತ—ನೂರುಪಾಪ. ೩೭. ಪೊಡ ಮಡು—ನಮಸ್ಕರಿಸು. ಬಾಳು—ಕತ್ತಿ. ೩೮. ಉರ್ವೀ—ಭೂಮಿ. ದುರ್ಬಲಸ್ಯ ಬಲೋ ರಾಜಾ—ಬಲವಿಲ್ಲದವರಿಗೆ ರಾಜನೇ ಬಲ. ಮುಳಿ—ಮುನಿ, ಕೋಪ ಗೊಳ್ಳು. ಮರುಳು—ಬುದ್ಧಿಯಿಲ್ಲದವನು. ೩೯. ಭುವನತ್ರಯ—ಮೂರು ಲೋಕ. ತಿಲಕ—ಮುಖ್ಯ. ಸದ್‌ಬೋಧ — ಕೇವಲಜ್ಞಾನ. ಸುಧಾರ್ಣವ — ಅಮೃತ ಸಮುದ್ರ. ಅವನತ—ನಮಸ್ಕರಿಸಿ ಬಾಗಿದ. ದಿವಿಜ—ದೇವತೆ. ಉರಗ—ಹಾವು, ಭೋಗಿಗಳು. ಅನನ್ಯಸಾಮಾನ್ಯ—ಸಾಮಾನ್ಯವಾಗಿ ಇತರರಿಗಿಲ್ಲದ.

೪೦. "(ಆದ್ದರಿಂದ) 'ಅರಿಯದೆ ಮಾಡಿದೆ. ಕ್ಷಮೆ!' ಎಂದು (ಇವರಿಗೆ) ಎರಗು" ಎಂದು ಎನ್ನಲು; ನೃಪನು ಎಂದನು: "ಯಾವ ಜಾತಿ, ಅದು ಯಾರು ಎಂದು ಅರಿಯದೆ, ಮಿಂದೂ ಮುಳುಗಿಯೂ ಅರಿಯದ ಮಣಕಿನ ಬಣಬೆಗೆ ನಾನು ಎರಗುವೆನೇ?

೪೧. "ಇಂದಿನ ಬೇಟೆಯಲ್ಲಿ (ಈ) ಸಿಂಟನನ್ನು ಕಂಡುದರಿಂದ ಒಂದು ಮೃಗ (ಕೂಡ) ಬೀಳದು, ನೋಡು." ಎಂದರೆ; (ಅದಕ್ಕೆ ಆ) ಪರದನು 'ಪುಣ್ಯಮೂರ್ತಿಯನ್ನು ಕಂಡೊಡನೆಯೆ ಪಾಪವು ಸಂಧಿಸುವುದೆ!

೪೦. ಎರಗು—ನಮಸ್ಕರಿಸು. ಮಣಕು—ಜಿಡ್ಡಿನ ಕೊಳೆ. ಬಣಬೆ—ರಾಶಿ. ೪೧. ಸಿಂಟ—ಕೊಳೆಯಿಂದ ನಾತಬಡಿಯುವವನು. ಪರದ—ವರ್ತಕ.

೪೨. "ತನು ಯಾರಿಗೂ ಅಶುಚಿ. ಶುದ್ಧವಾದ ಆತ್ಮವುಳ್ಳವನೆ ಶುಚಿ. ಕಾಗೆಯು ಹಾಗೆ ಏನೋ ಮಿಂದವನು ಏನು ಶುದ್ಧನೆ? 'ಸಂಸ್ಕಾರ ಶತೇನಾಪಿ ನ ಗೂಥಃ ಕುಂಕುಮಾಯತೇ' ಎಂದು ಅರಿಯೆಯಾ?

೪೩. "ಇವರು ಗಂಗಕುಲಚಕ್ರವರ್ತಿ, ಕಳಿಂಗವೆಂಬ ಧರೆಗೆ ಅಧೀಶರು. 'ಸಂಸಾರವು ಅಸಾರವಲಾ' ಎಂದು ಅರಿತು ಅರಿತು, ತಪಸ್ಸು ಮಾಡಿದರು. ಹೆಸರಿನಿಂದ (ಇವರು) ಸುದತ್ತಾಚಾರ್ಯರು."

೪೨. ಸಂಸ್ಕಾರ ಶತೇನಾಪಿ ಇತ್ಯಾದಿ—ನೂರು ಸಲ ತೊಳೆದು ಒರಸಿದರೂ ಅಮೇಧ್ಯ ಕುಂಕುಮಕೇಸರಿ ಆಗುವುದಿಲ್ಲ. ೪೩. ಅಧೀಶ—ಒಡೆಯರಿಗೆ ಒಡೆಯ.

೫೫. ಎಂಬುದಾಗಿ ಸುದತ್ತಾಚಾರ್ಯರ ಮುಂದಿನಿಂದ ಅರಮನೆಗೆ ಹೋಗದೆ, ಉರ್ವೀಭರವನ್ನು ನಂದನನಾದ ಅಭಯರುಚಿಯಲ್ಲಿ ಸಂದಿಸಿ, ತಾನು ಜೈನದೀಕ್ಷೆಯನ್ನು ಕೈಕೊಂಡನು.

೫೩. ನಂದನರು—ಮಕ್ಕಳು. ಕ್ಷಿತಿಪ—ರಾಜ. ತೆಳ್ಳನೆ—ಸ್ಪಷ್ಟವಾಗಿ. ಸಂಕಲ್ಪನ ವಧೆ—ವಧಿಸಬೇಕೆಂದು ಮನಸ್ಸಿನಲ್ಲಿ ಅಂದುಕೊಂಡದ್ದು. ೫೪. ತಣಿವು—ತೃಪ್ತಿ. ೫೫. ಮುಂದಿನಿಂದ—ಸಮುಖದಿಂದ. ಉರ್ವೀಭರ—ರಾಜ್ಯದ ಭಾರ. ನಂದನ—ಮಗ. ಸಂದಿಸು—ಸೇರಿಸು, ಒಪ್ಪಿಸು.

೫೬. (ಹೀಗೆ ಅರಸನು) ಶ್ರೀ ಜಿನದೀಕ್ಷೆಗೆ (ತನ್ನ) ತನುವನ್ನು ಯೋಜಿಸಲು, ಕಲ್ಯಾಣಮಿತ್ರನೂ ಕೂಡಿ 'ಯಥಾ ರಾಜಾ ತಥಾ ಪ್ರಜಾ' ಎಂಬ ಓಜೆಯಿಂದ ಅಂದು ಅರಸುಗಳು ಹಲವರು (ತಾವೂ ಜಿನದೀಕ್ಷೆಗೆ) ತರಿಸಂದರು.

೫೬. ಯೋಜಿಸು—ಸೇರಿಸು. ಯಥಾ ರಾಜಾ ತಥಾ ಪ್ರಜಾ—ರಾಜ ಹೇಗೋ ಪ್ರಜೆಯೂ ಹಾಗೆಯೇ. ಓಜೆ—ಕ್ರಮ, ರೀತಿ. ತರಿಸಲು—ನಿಶ್ಚಯಿಸು.

೫೭. ಆಗ, ತಂದೆಯ ತಪಸ್ಸಿನ ಉದ್ಯೋಗವು ತಡವಾಗದ ಹಾಗೆ ಒಡಂಬಟ್ಟು, ಅನುಜನಾದ ಯಶೋಧರನು ಮಹೀಭೋಗಕ್ಕೆ (ಅನುವು) ಆಗಿರಲು; ಬಳಿಕ ಅಭಯರುಚಿಯೂ ಅನುಜೆಯ ಸಹಿತವಾಗಿ

೫೮. ತಮಸ್ಸಿನಿಂದ ಹೊರಗೆ ಹೊರಟು, ಉತ್ತಮವಾದ ಚಾರಿತ್ರದಲ್ಲಿ ನೆರೆದು, ಮೈಯಿಕ್ಕಿದ ಸಂಯಮದಿಂದ ಸುದತ್ತಾಚಾರ್ಯರ ಸಮುದಾಯದಲ್ಲಿ ಇದ್ದು ತತ್ತ್ವದಲ್ಲಿ ಪರಿಣತನಾದನು.

೫೭. ಅನುಜ—ತಮ್ಮ. ಅನುಜೆ—ತಂಗಿ. ೫೮. ತಮಸ್ಸು—ಅಜ್ಞಾನ. ಚಾರಿತ್ರ—ನಡತೆ. ಮೈಯಿಕ್ಕಿದ—ಮೂರ್ತಿಮತ್ತಾದ, ರೂಪುಗೊಂಡ. ಸಮುದಾಯ—ಶಿಷ್ಯರ ಗುಂಪು. ತತ್ತ್ವ—ಜೈನಧರ್ಮ. ಪರಿಣತ—ಪಂಡಿತ.

೫೯. ನಾನು ಅಭಯರುಚಿಕುಮಾರನೇ. ಈ (ಇದುವರೆಗಿನ ಕಥೆಯಲ್ಲಿ) ನೆಗಳಿದ್ದ ಅಭಯಮತಿಯೂ ಈ ಅಕ್ಕನೇ. ನಾನಾ ವಿಧವಾದ ಕರ್ಮದಿಂದ (ನಾವು ಹೀಗಾದೆವು.) ನೀನು ಇನ್ನು ಏನು ಕೇಳುವೆ, ಮಾರಿದತ್ತ ನೃಪೇಂದ್ರಾ?

೬೦. ಗುರುವು ಇಂದು (ನಮ್ಮನ್ನು) ಭಿಕ್ಷೆಗೆ ಬೆಸಸಲು, (ನಾವು) ಬರುತ್ತಿದ್ದಾಗ, ನಮ್ಮನ್ನು ಹಿಡಿದು ತಂದರು. ಆ ದೆಸೆಗೆ (ಹಿಡಿದು ತಂದ

ರಲ್ಲಾ, ಏನು ಕೇಡು ಆದೀತೊ ಎಂಬ) ಭಯಕ್ಕೆ ಪುರುಳಿಲ್ಲ. ನಿನ್ನ ಕೇಡನ್ನು ಪರಿವೀಕ್ಷಿಸಿ, (ನೀನು ಹೀಗೆ ಪಾಪಮಾಡಿ ಕೆಡುವೆಯಲ್ಲಾ ಎಂಬ) ಕರುಣೆಯಿಂದ ತಲ್ಲಣಿಸುತ್ತೇನೆ.

೬೧. ಸಂಕಲ್ಪಹಿಂಸೆಯೊಂದರಲ್ಲಿ ನಾನು (ಪರಿಣಾಮವೇನೆಂದು) ಕಂಡೆ, ಭವದ ದುಃಖವನ್ನು ಉಂಡೆ. ನೀನು ನಿಃಶಂಕೆಯಿಂದ ಇಷ್ಟು ದೇಹಿಗಳನ್ನು ಕೊಲ್ಲುವೆ. (ಇದರಿಂದ) ನರಕದಲ್ಲಿ ನಿವಾರಣೆ ಪಡೆದೆ.

೫೯. ನೆಗಳು—ಹೆಸರಾಗು. ೬೦. ದೆಸೆ—ದಿಕ್ಕು. ಪುರುಳು—ತಿರುಳು, ಸಾರ. ತಲ್ಲಣಿಸು—ನಡುಗು. ೬೧. ಭವ—ಸಂಸಾರ. ನಿವಾರಣೆಪಡೆ—ಕಟ್ಟು ಬೀಳು.

೬೨. (ಈ ಪ್ರಕಾರವಾಗಿ ಅಭಯರುಚಿಕುಮಾರನು) ಎಂದ ನುಡಿ (ಆ ಮಾರಿಯ ದೇಗುಲದಲ್ಲಿ) ನೆರೆದ ಜೀವಕದಂಬಗಳಿಗೆ ಅಭಯವೆಂಬ ಡಂಗುರದ ಹಾಗೆ ಒಪ್ಪಿತವಾಗಲು, ಮಾರಿದತ್ತನೃಪನು ಉದ್ವೇಗಪರ ನಾಗಿ ಬಿಲ್ಲುಂಬೆರಗು ಆದನು.

೬೨. ಕದಂಬ—ಗುಂಪು. ಬಿಲ್ಲುಂಬೆರಗಾಗು—ಆಶ್ಚರ್ಯದಿಂದ ಸ್ತಂಭಿತನಾಗು.

೬೩. (ಆಗ) ಆ ಚಂಡಮಾರಿ (ದೇವತೆ) ಲೋಚನಕ್ಕೆ ಗೋಚರ ವಾಗುವ ತನುವುಳ್ಳವಳಾಗಿ, (ಅಭಯರುಚಿ) ಕುಮಾರನನ್ನು ವಂದಿಸಿ, "ನೀನು (ನನಗೆ) ಆಚಾರ್ಯನೆ (ಸರಿ)" ಎಂದು; ನೆರೆದ ಜಾತ್ರೆ ನೆರೆ ಕೇಳುವಂತೆ ಇಂತೆಂದು ಸೂಚಿಸಿದಳು:

೬೪. "ಪ್ರಜೆಯೆಲ್ಲವೂ ಜಲ ಗಂಧ ಸ್ರಜ ತಂಡುಲ ಧೂಪ ದೀಪ ಚರು ತಾಂಬೂಲ ವ್ರಜದಿಂದ (ಇನ್ನು ಮುಂದೆ ನನ್ನನ್ನು) ಪೂಜಿಸು ವುದು (ತಕ್ಕುದು.) ಜೀವಜಾತದಿಂದ (ಇನ್ನು ಮುಂದೆ) ನನಗೆ ಬಲಿ ಯನ್ನು ಕೊಟ್ಟರೆ, ಮುನಿಯುತ್ತೇನೆ."

೬೩. ಲೋಚನ—ಕಣ್ಣು. ಗೋಚರವಾಗು—ಕಾಣಿಸಿಕೊ. ತನು—ದೇಹ. ೬೪. ಸ್ರಜ—ಹೂವು. ತಂಡುಲ—ಅಕ್ಕಿ. ಚರು—ಹವಿಸ್ಸು. ವ್ರಜ—ರಾಶಿ.

೬೫. (ಹೀಗೆ) ಎಂದು, (ಚಂಡಮಾರಿ) ತಿರೋಹಿತೆಯಾದರೆ; ಮಾರಿದತ್ತ ವಿಭುವು (ಮಾರಿಯ ಮುಂದೆ) ತಂದಿರಿಸಿದ ಜೀವರಾಶಿಯನ್ನು ಬಿಡಿಸಿ, ಜನಕ್ಕೆ ಆನಂದವನ್ನು ಉಂಟುಮಾಡಿದವರಾದ ತನ್ನ ಅನುಜೆಯ ನಂದನರನ್ನು ಲಾಲಿಸಿದನು.

೬೬. (ಆ ಮಕ್ಕಳಿಗೆ) ಒಡನೆಬಂದ ಆಶುಭಕ್ಕೆ ಗುಡುಗುಡನೆ ಸುರಿಯುವ (ತನ್ನ) ಕಣ್ಣ ಹನಿಯು ಮಂಗಳಸ್ನಾನವನ್ನು ಅಂದು ಒಡರಿಸಲು, (ಮಾರಿದತ್ತನು ಆ) ಸೋದರ ಶಿಶುಗಳನ್ನು (ತನ್ನ) ಒಡಲಿನಲ್ಲಿ ಮಡಗುವನೋ ಎಂಬಂತೆ ಅಪ್ಪಿ, ಬೆಚ್ಚನೆ ಸುಯ್ದನು.

೬೫. ತಿರೋಹಿತೆ—ಅಂತರ್ಧಾನವಾದವಳು. ವಿಭು—ರಾಜ. ಅನುಜೆ—ತಂಗಿ. ನಂದನರು—ಮಕ್ಕಳು. ೬೬. ಒಡರಿಸು—ಉಂಟುಮಾಡು. ಸುಯ್—ನಿಟ್ಟುಸಿರುಬಿಡು.

೬೭. ತಾನು ಅದುವರೆಗೂ ಒದಗಿಸಿದ ಏನಂಗಳಿಗೆ ಅಳುಕಿ, (ಮಗನಾದ) ಕುಸುಮದತ್ತನಿಗೆ ಧರಿತ್ರೀನಾಥ ಪದವಿಯನ್ನು ಕೊಟ್ಟು, ಆ ನರಪತಿ(ಯಾದ ಮಾರಿದತ್ತನು) ಬಳಿಕ ದೀಕ್ಷೆಯನ್ನು ಕೈಕೊಂಡನು.

೬೮. ಕೆಲವುಕಾಲ ಉಗ್ರವಾದ ತಪಸ್ಸನ್ನು ಸಲ್ಲಿಸಿ, ಸಮಾಧಿಯಲ್ಲಿ ಮುಡಿಪಿ, ಮೂರನೆಯ ದಿವವು ನೆಲೆಯಾಗಲು, ಮಾರಿದತ್ತನು, ಕಲಿಯನ್ನು ಮೂದಲಿಸಿದಂತೆ ದೇವನೆ ಆದನು.

೬೭. ಏನ—ಪಾಪ. ಅಳುಕು — ಹೆದರು. ಧರಿತ್ರೀ — ಭೂಮಿ. ೬೮. ಮುಡಿಪು—ಮರಣಹೊಂದು. ದಿವ—ಸ್ವರ್ಗ. ಕಲಿ—ಕೆಟ್ಟಗುಣ. ಮೂದಲಿಸು—ನೀನು ನನ್ನನ್ನು ಕೆಡಿಸಲು ಎಷ್ಟೇ ಯತ್ನಿಸಿದರೂ ಕಡೆಗೂ ನಾನು ಸ್ವರ್ಗಕ್ಕೆ ಏರಿದೆ, ಎಂದು ಹಂಗಿಸು.

೬೯. (ಅಭಯರುಚಿ ಅಭಯಮತಿ) ಎಂಬ ಅವಳಿಗಳು ಬಳಿಕ ಸುದತ್ತರ ಸಮುದಾಯದಲ್ಲಿ ಆಗಮೋಕ್ತಿಯಿಂದ ನಡೆದು, ತಪಸ್ಸು ತಮಗೆ ಅಮರುವಂತೆ ನೋಂಪಿಮಾಡಿ, ಮುಡಿಪಿದ ಸಮಯದಲ್ಲಿ ಈಶಾನ ಕಲ್ಪದಲ್ಲಿ ಜನಿಯಿಸಿದರು.

೭೦. (ಇದರ ಜೊತೆಗೆ) ಮತ್ತೆ–ಯಶೋಧರನು ಧರ್ಮವಿಹಾರ ನಿಮಿತ್ತವಾಗಿ ಬಂದಿರುವಾಗ, ತಮ್ಮವರಿಗೆ ಆದ ಉತ್ತಮಗತಿಯನ್ನು ಕೇಳಿ, ಸುದತ್ತಾಚಾರ್ಯರ ಪದಾಬ್ಜವನ್ನು ಪೂಜಿಸಿದನು.

೬೯. ಆಗಮೋಕ್ತಿ—ತೀರ್ಥಂಕರರು ಹೇಳಿದ ಮಾತು. ಅಮರು—ಹೊಂದಿಕೊ. ನೋಂಪಿ—ವ್ರತ. ಈಶಾನಕಲ್ಪ—ಇದೊಂದು ಸ್ವರ್ಗವಿಶೇಷ.

೭೧. (ಪೂಜಿಸಿ ಹೀಗೆಂದನು:) "ಜೀವದಯೆ ಎಂಬುದು ನಮ್ಮ ಮಾವನ ಹೆಸರಿದ್ದ ನಾಡಿನಲ್ಲಿ ಇರದು. (ಅಂತಹ) ಆತನಿಗೂ ದೇವಗತಿ

ಆಯಿತು! ಸೋದರರಿಗೆ ಆ ವೈಭವವಾಯಿತು! ಧರ್ಮದಿಂದ ಆಗದುದು ಏನು!"

೭೨. (ಹೀಗೆ) ಎಂದು(ಧರ್ಮದಲ್ಲಿ) ಮನಸ್ಸು ಸಂದು, ಜಿನಮತವೆಂಬ ನಂದನದಲ್ಲಿ ದಾನವೆಂಬ ಲತೆಯು ದಯೆಯೆಂಬ ರಸದಿಂದ ಜಗವೇ ಹಂದರ ಎಂಬಂತೆ ಹಬ್ಬಿ ಹೊಸ ಯಶಸ್ಸಿನಿಂದ ಮರಲ್ದು ಇರುವಂತೆ ಯಶೋಧರನು (ಧರ್ಮದಾನವೆಂಬ ಲತೆಯನ್ನು) ಬೆಳೆಯಿಸಿದನು.

೭೧. ಮಾವ—ಮಾರಿದತ್ತ. ೭೨. ಸಂದು—ಸೇರಿ. ಹಂದರ—ಬಳ್ಳಿ ಹಬ್ಬುವುದಕ್ಕೆ ಅವಲಂಬನವಾದ ಚಪ್ಪರ. ಮರಲು—ಹೂಬಿಡು.

೭೩. ಅಭಯರುಚಿಕುಮಾರನು ಹಿಂಸಾರಭಸಮತಿಯಾದ ಮಾರಿದತ್ತನಿಗೆ ಸ್ವೈಪನ್ನು ಹೇಳಿ, (ಅವನನ್ನು) ಧರ್ಮಕ್ಕೆ ತಂದ ಈ ಶುಭ ಕಥನವನ್ನು ಅತಿಯಾದ ಆನಂದದಿಂದ ಕೇಳುವ ಭವ್ಯಪ್ರಭುಸಭೆಗೆ ಮಂಗಳವಾದ ಶ್ರೀವಿಲಾಸವು ಎಸೆದಿರುವುದು.

೭೩. ಮೊದಲನೆಯ ಅವತಾರದ ಕಡೆಯ ಪದ್ಯದ ಕೆಳಗೆ ನೋಡಿ.

೭೪. ಪರಮಜಿನೇಂದ್ರನ ಶಾಸನವೆಂಬ ವಸಂತದಲ್ಲಿ ಈ ಕೃತಿಯೆಂಬ ಕೋಗಿಲೆಯ ಸ್ವನವು (ಎಲ್ಲಕಡೆಗೂ) ಹರಡಲಿ. ಅಸಹಾಯಶೂರನಾದ (ನಮ್ಮರಸನ) ಭುಜಕ್ಕೆ ಜಯವು ಸಮಸಲ್ಲಲಿ. ನಾಡಪ್ರಭುವಾದ ಜನಾರ್ದನದೇವನ ವಕ್ತ್ರಪದ್ಮದಲ್ಲಿ ಸಂತತವೂ ಪರಿಮಳದಂತೆ ವಾಣಿ ನೆಲಸಿರಲಿ, ವಿಕಾಸವಾದ ವಿಲಾಸದ ಹಾಗೆ ಸಿರಿ ನೆರೆದಿರಲಿ.

೭೪. ಸ್ವನ—ಕೂಗು. ಸಮಸಲ್ಲು—ಸ್ಥಿರವಾಗಿ ಸೇರು. ವಕ್ತ್ರಪದ್ಮ—ಕಮಲದಂಥ ಮುಖ. ವಾಣಿ—ಸರಸ್ವತಿ. ಸಿರಿ—ಶ್ರೀ.

ಇದು ಪರಮ ಜಿನಸಮಯವೆಂಬ ಕುಮುದಿನಿಗೆ ಶರಚ್ಚಂದ್ರನೆನಿಸಿರುವ
ಸದಮಲ ರಾಮಚಂದ್ರ ಮುನೀಂದ್ರರ ಪರಮಭಕ್ತನಾದ ಜನ್ನಕವಿಯು
ಜನಕ್ಕೆ ಮಾಡಿದ ಯಶೋಧರ ಚರಿತಾವತಾರವನ್ನು ಸಂಗ್ರಹಿಸಿ
ಶ್ರೀ ಕ. ವೆಂ. ರಾಘವಾಚಾರ್ ಸಂಪಾದಿಸಿದ ಯಶೋಧರ ಚರಿತೆಗೆ
ರತ್ನನ ಸರಳರೂಪದ ಅನುವಾದ ಮುಗಿಯಿತು.

## ಯಶೋಧರ ಚರಿತೆಯಲ್ಲಿ ಭವಾವಳಿ

**ಪ್ರಾರಂಭದಲ್ಲಿ:** ಮಗ **ಯಶೋಧರ**, ತಾಯಿ **ಚಂದ್ರಮತಿ.**

ಮಗನು ಹೆಂಡತಿಯ ಕೆಟ್ಟ ಕೆಲಸವನ್ನು ಕನಸಿನ ನೆಪದಿಂದ ವಂಚನೆಮಾಡಿ ಹೇಳಿ, ತಾಯಿ ಮೋಹದಿಂದ ಮಗನ ಕೈಯಲ್ಲಿ ಹಿಟ್ಟಿನ ಕೋಳಿಯನ್ನು ಬಲಿ ಕೊಡಿಸಿ, ಇಬ್ಬರೂ ಸತ್ತು, ಮೃಗಜಾತಿಯಲ್ಲಿ ನವಿಲಾಗಿ, ನಾಯಾಗಿ ಹುಟ್ಟುತ್ತಾರೆ. (೩—೬ರಿಂದ ೩೧.)

**ಜನ್ಮ ೧:** ವಿಂಧ್ಯದಲ್ಲಿ **ನವಿಲು,** ಕರಹಟದಲ್ಲಿ **ಬೇಟೆನಾಯಿ.**

ಈ ಎರಡೂ, ತಾವು ಹಿಂದೆ ಯಶೋಧರ ಚಂದ್ರಮತಿಯರಾಗಿದ್ದ ಅರಮನೆಗೇ ಬಂದು ಸೇರುತ್ತವೆ. ಅಲ್ಲಿ ನವಿಲು ಪೂರ್ವಜನ್ಮದ ರೋಷ ದಿಂದ ಅಷ್ಟವಂಕನ ಕಣ್ಣನ್ನು ಕುಕ್ಕಿ, ಅಮೃತಮತಿಯ ಆಗ್ರಹಕ್ಕೆ ಗುರಿ ಯಾಗಿ, ಉಪ್ಪರಿಗೆಯಿಂದ ಕೆಳಗೆ ಬೀಳುತ್ತದೆ. ಬೀಳುವ ಮಗನನ್ನು ಹಿಡಿಯಲು ಹಾರಿದ ನಾಯನ್ನು ಯಶೋಮತಿ ನೆತ್ತದ ಮಣೆಯಿಂದ ಇರಿಯುತ್ತಾನೆ. ಎರಡೂ ಸಾಯುತ್ತವೆ. (೩—೩೨ರಿಂದ ೪೨.)

**ಜನ್ಮ ೨:** ವಿಂಧ್ಯದಲ್ಲಿ **ಮುಳ್ಳುಹಂದಿ,** ವಿಂಧ್ಯದಲ್ಲಿ **ಹಾವು.**

ಹಿಂದಿನ ಜನ್ಮದಲ್ಲಿ ತನ್ನ ಮೇಲೆ ಹಾರಿತಲ್ಲಾ ಎಂಬ ಹಗೆಯಿಂದ ಮುಳ್ಳುಹಂದಿ ಹಾವನ್ನು ತಿನ್ನುತ್ತದೆ. ನಿಷ್ಕಾರಣವಾದ ಹಗೆಯಿಂದ ಹಾವನ್ನು ತಿಂದುದಕ್ಕೆ ಪ್ರತಿಯಾಗಿ ನಿಷ್ಕಾರಣವಾದ ಹಗೆಯಿಂದ ಒಂದು ಹುಲಿ ಮುಳ್ಳುಹಂದಿಯನ್ನು ಕೊಂದುಬಿಡುತ್ತದೆ. (೩—೪೩ರಿಂದ ೪೪.)

**ಜನ್ಮ ೩:** ಸಿಂಪಾನದಿಯಲ್ಲಿ **ಮೀನು,** ಅದೇ ನದಿಯಲ್ಲಿ **ಮೊಸಳೆ.**

ಒಂದು ದಿನ ಮೊಸಳೆ ಮೀನನ್ನು ಹಿಡಿಯಲು ನೆಗೆಯುತ್ತದೆ. ಮೊಸಳೆಯ ಬಾಯಿಗೆ ಅರಸನ ಕುಬ್ಜ ಸಿಕ್ಕುತ್ತಾನೆ. ಆದರಿಂದ ಅರಸನಿಗೆ ಕೋಪ ಬಂದು ಮೊಸಳೆಯನ್ನು ಹಿಡಿತರಿಸಿ, ಕೊಲ್ಲಿಸುತ್ತಾನೆ. ಅದು ಹೊಲಗೇರಿಯಲ್ಲಿ ಆಡಾಗಿ ಹುಟ್ಟುತ್ತದೆ.

ಅದೇ ಅರಸನೇ ಮೀನನ್ನು ಜೀವಶ್ರಾದ್ಧಕ್ಕೆ ಉಪಯೋಗಿಸುತ್ತಾನೆ. ಅದು ಅಲ್ಲಿ ತನ್ನ ಹಿಂದಿನ ಜನ್ಮವನ್ನು ನೆನೆದು, ಸತ್ತು, ಮೇಲೆ ಹೇಳಿದ ಹೊಲಗೇರಿಯ ಆಡಿನ ಬಸಿರಲ್ಲಿ ಹುಟ್ಟುತ್ತದೆ. (೩—೪೫ ರಿಂದ ೫೧.)

**ಜನ್ಮ ೪: ಹೊಲಗೇರಿಯ ಆಡಿನಮರಿ, ಹೊಲಗೇರಿಯ ಆಡು.**

ಮರಿ ಬೆದೆಯಾದ ತಾಯನ್ನು ಏರುತ್ತದೆ; ಬೇರೆ ಒಂದು ಗಂಡಾಡಿನ ಗುದ್ದಿಗೆ ಸಿಕ್ಕಿ ಸಾಯುತ್ತದೆ. ಅದೇ ತಾಯಿಯ ಬಸಿರಲ್ಲಿ, ತಾನೇ ಮತ್ತೆ ಮಗುವಾಗಿ ಬಂದು ನೆಲಸುತ್ತದೆ. (೩—೫೨ ರಿಂದ ೫೩)

ಗರ್ಭಿಣಿಯಾದ ಆ ತಾಯನ್ನು, ಬೇಟೆಗೆ ಹೋದ ಯಶೋಮತಿ ಕೊಲ್ಲುತ್ತಾನೆ. ಆ ತಾಯಿ ಸಾಯುತ್ತದೆ, ಮರಿ ಜೀವಂತವಾಗಿ ಜನಿಸುತ್ತದೆ. (೩—೫೪.) ತಾಯಿಯ ಜೀವ ಕಳಿಂಗದಲ್ಲಿ ಕೋಣವಾಗಿ ಹುಟ್ಟುತ್ತದೆ. (೩—೬೩.)

**ಜನ್ಮ ೫: ಆಡಿನ ಮರಿ, ಕಳಿಂಗದಲ್ಲಿ ಕೋಣ.**

ಮಾಂಸವನ್ನು ನಾಯಿ ಮುಟ್ಟಿದ ದೋಷವನ್ನು ಪರಿಹರಿಸಲು ಆ ಆಡಿನ ಮರಿಯನ್ನು ತಂದಾಗ, ಅದಕ್ಕೆ ತನ್ನ ಹಿಂದಿನ ಜನ್ಮ ಜ್ಞಾಪಕ ಬರುತ್ತದೆ. ಅಮೃತಮತಿಯ ನೆನಪಾಗುತ್ತದೆ. (೩—೫೫ರಿಂದ ೬೨.)

ಕಳಿಂಗದ ಕೋಣ ಸಿಂಪಾನದಿಯಲ್ಲಿ ಬಂದಿರುವಾಗ ಅದು ಯಶೋಮತಿಯ ಕುದುರೆಯನ್ನು ಕೊಲ್ಲುತ್ತದೆ. ಅರಸನು ಆ ಕೋಣವನ್ನು ಕೊಲ್ಲಿಸುತ್ತಾನೆ. ಅದು ಆ ಊರಿನ ಮಾದರನ ಮನೆಯಲ್ಲಿ ಕೋಳಿಯಾಗುತ್ತದೆ. (೩—೬೩ರಿಂದ ೬೬; ೭೩.)

ಆ ಕೋಣನ ಮಾಂಸದ ರುಚಿ ನಾಲಗೆಗೆ ಹತ್ತಿ, ಅಮೃತಮತಿ (ಹಿಂದೆ ಯಶೋಧರನಾಗಿದ್ದ) ಆಡಿನ ಮರಿಯನ್ನು ಕೊಲ್ಲಿಸಿ, ಅದರ ಮಾಂಸವನ್ನು ತಿನ್ನುತ್ತಾಳೆ. ಅದು ಆದೇ ಊರಿನ ಮಾದರನ ಮನೆಯಲ್ಲಿ ಕೋಳಿಯಾಗಿ ಹುಟ್ಟುತ್ತದೆ. (೩—೬೭ರಿಂದ ೭೩)

[ಹೀಗೆ ಹಿಂದೆ ತಾಯಿ ಮಗ ಆಗಿದ್ದವರ ಜೀವಗಳು ಅದೇ ಮಾದರನ ಅದೇ ಕೋಳಿಯ ಬಸಿರಲ್ಲಿ ಅವಳಿಯಾಗಿ ಹುಟ್ಟುತ್ತವೆ.]

## ಜನ್ಮ ೬: ಕೋಳಿಮರಿ, ಕೋಳಿಮರಿ.

ಚಂಡಕರ್ಮನು ಆ ಕೋಳಿಗಳೆರಡನ್ನೂ ಸಾಕುತ್ತಾನೆ. ಒಮ್ಮೆ ಅವನು ಅಕಂಪನರ ಬಳಿ ಧರ್ಮವನ್ನು ಕೇಳುತ್ತಿರುವಾಗ, ಆ ಹಕ್ಕಿಗಳೂ ಧರ್ಮಾನುರಾಗವನ್ನು ಹೊಂದಿ, ಕೂಗುತ್ತವೆ. ಸ್ವರವೇದವಿದ್ಯೆಯಿಂದ ಅವುಗಳನ್ನು ಯಶೋಮತಿ ಕೊಲ್ಲುತ್ತಾನೆ. ಅವು ಎರಡೂ ಸತ್ತು, ಯಶೋಮತಿಯ ಅರಸಿಯಾದ ಕುಸುಮಾವಳಿಯಲ್ಲಿ ಅವಳ ಮಕ್ಕಳಾಗಿ ಬರುತ್ತವೆ. (೪—೪ ರಿಂದ ೩೦.)

## ಜನ್ಮ ೭: ಅಭಯರುಚಿ, ಅಭಯಮತಿ.

ಇಬ್ಬರೂ ಸುದತ್ತಾಚಾರ್ಯರಲ್ಲಿ ಜಿನದೀಕ್ಷೆ ಪಡೆಯುತ್ತಾರೆ. ಚಂಡಕರ್ಮನ ಕೈಗೆ ಸಿಕ್ಕಿದಾಗ, ಮಾರಿದತ್ತನನ್ನು ಧರ್ಮದ ಮಾರ್ಗಕ್ಕೆ ತರುತ್ತಾರೆ. ಕಡೆಗೆ ತಪಸ್ಸು ಮಾಡಿ, ಮುಗಿದು, ಈಶಾನಕಲ್ಪದಲ್ಲಿ ಹುಟ್ಟುತ್ತಾರೆ. (೪—೩೧, ೩೨; ೫೭, ೫೮; ೬೯.)

[ಹೀಗೆ ಭವಾವಳಿಯನ್ನು ನಿರೂಪಿಸುವ ಸಂದರ್ಭದಲ್ಲಿಯೇ ಕವಿ, ಜೈನರಿಗೆ ಒಪ್ಪಿಗೆಯಾಗದಿರುವ ವೈದಿಕ ಶ್ರಾದ್ಧವಿಧಿಯನ್ನು ಕುರಿತು ಅರ್ಧಪರಿಹಾಸದಿಂದ, ಅರ್ಧ ಮರುಕದಿಂದ, ಒಂದುಕಡೆ ಮೀನಿನ ಮುಖದಿಂದ (೩—೪೯, ೫೦), ಇನ್ನೊಂದು ಕಡೆ ಆಡಿನ ಮರಿಯ ಬಾಯಿಂದ (೩—೫೮ ರಿಂದ ೬೦) ತನ್ನ ನಂಬಿಕೆಗಳನ್ನು ಆಡಿಸಿ ವಿಡಂಬನೆಮಾಡಿದ್ದಾನೆ.]

# ಯಶೋಧರ ಚರಿತೆಯಲ್ಲಿ ಅಲಂಕಾರ

ಯಶೋಧರ ಚರಿತೆ ಬಹುತೀವ್ರವಾದ ಗತಿಯಲ್ಲಿ ಹೋಗುವ ಕಾವ್ಯ, 'ಮನಸ್ಸಾಕ್ಷಿಯಂತೆ ಇನಿದಾಗಿ' ಕಿರುನುಡಿ ನುಡಿದುಕೊಂಡು ಕಥೆಯನ್ನು ಸಾಗಿಸಿಕೊಂಡು ಹೋಗುವ ಕಾವ್ಯ. ಮೊದಲನೆಯ ಅವತಾರ ದಲ್ಲಿ ಬರುವ ಅಭಯರುಚಿ ಅಭಯಮತಿಯರ ಪುಟ್ಟಪುಟ್ಟವಾದರೂ ಸರ್ವಪುಷ್ಟವಾದ ಮಾತು (೨೧ರಿಂದ ೨೫), 'ನೃಪವರ ನಿರ್ಮಲಧರ್ಮ ದಿಂದೆ ಪಾಲಿಸು ಧರೆಯಂ' (೩೨), 'ನಿನಗೆ ಪಥ್ಯಮಾವುದದಂ ಮಾಡು' (೩೮), 'ಒಲವಾದೊಡೆ ರೂಪಿನ ಕೋಟಲೆಯೇವುದೊ' (೨—೨೫), 'ಕಾವರೆ ಕಣೆಗೊಳ್ವೊಡಬ್ಬೆ ಬಾರಿಪರೊಳರೇ' (೩—೧೭), 'ಕಣ್ಣಱಿಯ ದೊಡಂ ಕರುಳಱಿಯದೆ' (೩—೪೨)—ಎಂಬ ಇದೇ ರೀತಿಯ ಮಾತಿನ ಧಾಟಿ ಇಲ್ಲಿನ ಕಥೆಯ ಓಟ. ಇಂಥದರಲ್ಲಿ ವರ್ಣನೆ ಎಷ್ಟೋ ಅಷ್ಟೇ, ಅಲಂಕಾರ ಎಷ್ಟೋ ಅಷ್ಟೇ, ಎಂಬ ಮಿತಿಯನ್ನು ಸಾಧಿಸಿರುವುದು ಈ ಕವಿಯ ಕೀರ್ತಿ.

ಅಲಂಕಾರಗಳಲ್ಲಿ ಎಲ್ಲೂ ಪಾಂಡಿತ್ಯ ಪ್ರದರ್ಶನವಿಲ್ಲ. ಮೊದಲನೇ ಅವತಾರದ ಮೊದಲನೇ ಪದ್ಯದ ವಿರೋಧಾಭಾಸವೊಂದು, ಮೂರನೆಯ ಅವತಾರದ ೭೫ನೇ ಪದ್ಯದ ಶ್ಲೇಷೆಯೊಂದು ಬಿಟ್ಟರೆ, ಮಿಕ್ಕೆಲ್ಲೂ ರಾವು ಬಡಿಯುವ ಅಲಂಕಾರವಿಲ್ಲ. ಉಳಿದೆಡೆ ಅಲಂಕಾರ ಬಂದರೆ, ಉದ್ದಕ್ಕೂ ಸಹಜವಾದ ಉಪಮಾ, ವಿರಳವಾಗಿ ಅಲ್ಲಲ್ಲೇ ಒಂದೊಂದು ರೂಪಕ.

ಉಪಮಾಗಿಂತ ರೂಪಕ ಹೆಚ್ಚು ಪ್ರಯತ್ನದ ಫಲವಾಗಿಯೇ ಬರುವುದಾದರೂ ಇಲ್ಲಿನ ರೂಪಕಗಳು ಬರಿಯ ಅಲಂಕಾರವಾಗಿರದೆ, ಅರ್ಥವನ್ನು ಹೆಚ್ಚಿಸತಕ್ಕವಾಗಿವೆ. ಉದಾಹರಣೆಗೆ : ದುರಿತತಮಿಸ್ರ, ಅಮಳದೃಷ್ಟಿಕುವಳಯವನ, ಕಥಾಶ್ರವಣಮೆಂಬ ಚಂದ್ರೋದಯ, ದಂತಪ್ರಭೆಯೆಂಬ ಶೀತಕರ, ಅಘಧ್ವಾಂತೌಘ ಮಧುಪಮಾಲಿಕೆ, ಕರ ಸರಸಿರುಹ, ಇತ್ಯಾದಿ ಈ ರೀತಿಯವು ಅನೇಕ ಜನರ ಕೈಬಳಕೆಯಿಂದ ಸಮಕಲಾಗಿ ಕಾಂತಿಕೆಟ್ಟಿರುವ ಸಂಭವವುಂಟು. ಆದರೆ ಇಲ್ಲಿ ಒಂದೊಂದು ಸಲ ರೂಪಕಗಳ ಮಾಲೆಯನ್ನೇ ಬಳಸಿಕೊಂಡು, ಹೇಳುವ ಚಿತ್ರದ

ಪಕ್ಕದಲ್ಲೇ ಒಂದು ದೃಷ್ಟಾಂತವನ್ನೂ ರಚಿಸುತ್ತಾನೆ. ನರೆಯೆಂಬ ಹೊರಸು ಮುಖವೆಂಬ ಅರಮನೆಯನ್ನು ಹೊಕ್ಕದ್ದು(೨—೮), ಯಶೋಧರನ ಆತ್ಮಕುರಂಗವು ಕೆಡೆದದ್ದು (೩—೨೬), ಅಕಂಪನರು ಮಿಥ್ಯಾ ಮೃಗವನ್ನು ಬೆದರಟ್ಟಿದ್ದು (೪–೧೪) ಉತ್ತಮವಾದ ಉದಾಹರಣೆಗಳು.

ಉಪಮೆಗಳ ಸುರಿಮಳೆಯಂತೂ ಇಲ್ಲಿ ಎಷ್ಟುಮಟ್ಟಿಗಿದೆಯೆಂದರೆ, ಈ ಕಾವ್ಯದ ರಮಣೀಯತೆಗೆ ಇವು ಅರ್ಧದಷ್ಟಾದರೂ ಹೊಣೆ ಎಂದರೂ ತಪ್ಪಾಗದು. ಇಲ್ಲಿಯೂ ಅಷ್ಟೇ: ಕೆಲವು ಅತಿಪರಿಚಯದಿಂದ ನಮ್ಮ ಅವಜ್ಞತೆಗೆ ಈಡಾಗುವ ಭಯವುಂಟು; ಇನ್ನು ಕೆಲವು ತಮ್ಮ ಅಪೂರ್ವತೆಯಿಂದ ನಮ್ಮನ್ನು ಆಕರ್ಷಿಸಿಕೊಳ್ಳುವ ಸುಖವುಂಟು.

ಧನಮಂ ಕಂಡ ದರಿದ್ರನ ಮನದವೊಲ್, ಅಂಬರತರಂಗಿಣೀ ಪುಳಿನಮನೇಱುವ ಹಂಸನಂತೆ, ಅಭ್ರಮುವೆರಸಭ್ರಗಜಂ ಸೆಜ್ಜರಕ್ಕೆ ಬಂದವೊಲ್, ಪುಳಿಂದನ ಕಣೆಗಟ್ಟನಿಂದ ವನಹರಿಣಿಯವೊಲ್, ಬೇವಂ ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ, ಕಳಹಂಸೆಗೆ ಗಿಡಿಗನೆಱಗಿದಂತೆ, ಗೋದಾಮೆಗಂಡ ನವಿಲಂತೆ, ಕಾರ್ಗಂಡ ಹಂಸನವೊಲ್, ಪೂವಿನ ಸೌರಭದ ಮಾಱ್ಕೆ, ನವರತ್ನದ ಪಂಜರದೊಳ್ ದಿವಿಜಶರಾಸನದ ಮಱಿಯನಿರಿಸಿದವೊಲ್, ಬೆಕ್ಕು ಕೊಕ್ಕನಂ ಪಿಡಿವಂತಿರೆ, ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದವೊಲ್, ರತಿವೆರಸು ಮನಸಿಜಂ ಬರ್ಪಂತೆ, ತಳರದೆ ಮೇರುವೊಲ್—ಮುಂತಾದುವು ಸಾಮಾನ್ಯ. ಇವು ಉಪಮೇಯಗಳ ಪಕ್ಕದಲ್ಲಿ ಒಂದು ಹಣತೆ ಇರಿಸಿದಂತೆ, ಅವು ಸ್ಪಷ್ಟವಾಗಿ ಕಾಣಲು ಸಹಾಯಮಾಡುತ್ತವೆಯೇ ಹೊರತು, ಅವುಗಳ ಕಾಂತಿಯನ್ನು ಅಷ್ಟಾಗಿ ಹಿಗ್ಗಿಸುವುದಿಲ್ಲ.

ಆದರೆ, ತರುಣ ವನಹರಿಣ ಯುಗಮಂ ತರಕ್ಷು ಪಿಡಿವಂತೆ (೧—೨೦), ಕೃತಾಂತನ ಬಾಣಸುವೊಲ್ (೨೬), ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ (೨೮), ಮಾರಿಯ ಮೂರಿಯವೊಲ್ (೩೧), ಕಂಬಂದಪ್ಪಿದ ಕರಿಯಂತೆ (೨—೯), ನಿದ್ರೆಗೆ ಕತಕಬೀಜಮಾಯ್ತೆನೆ (೧೩), ಪಱಮೆ ಪಗಲ್ ಮುಗಿಯೆ ಸಿಲ್ಕಿ ಕೈರವದಿನಿರುಳ್ ಪೊಱಮಡುವಂತೆ (೨೯), ದೋಷದ ಬೆನ್ನೊಳೆ ಸಂದಿಸುವ ದಂಡದಂತೆ

(೩೦), ಕೇರೆ ಪೊರಳ್ವಂತೆ (೩೨), ನೀರ್ಮುಟ್ಟದ ಜೇನೆಯ್ಯಂತೆ (೪೦), ಅಱುನೀರ ಮೀನ್ಬೊಲ್ (೩—೫), ಪಕ್ಕಿಯ ಪದಕಂ ಬೀಳ್ವಂತಿರೆ ಸುಧಾಂಶುಬಿಂಬದ ಕೊರಲಿಂ (೩೯), ಮೇವಂತಿರೆ ಪುಲ್ಲಸರವಿಯುಂ ಪುಲಿ ಗೋಣಂ (೪೩), ನದಿ ಕಣ್ದೆಱೆದಂತೆ (೪೬), ಕುರುಡಂ ನಿಧಿಯಂ ಕಾಣ್ಬಂತೆ (೪—೪) ಮುಂತಾದ ಕಡೆ, ಯಾವುದಕ್ಕೆ ಹೋಲಿಸುವನೋ ಆದರ ಕೆಲವು ವಿಶಿಷ್ಟವಾದ ಗುಣಗಳಿಂದ ಯಾವುದನ್ನು ಹೋಲಿಸುತ್ತಿರುವನೋ ಆದರ ಸ್ವಭಾವ ಇನ್ನಷ್ಟು ಸ್ಪಷ್ಟವಾಗುತ್ತದೆ, ಇನ್ನಷ್ಟು ಪುಷ್ಟವಾಗುತ್ತದೆ.

ಇಂತಹ ಅಲಂಕಾರಗಳಿಂದಲೇ ಕಾವ್ಯಕ್ಕೆ ಶೋಭೆ, ಕಥೆಗೆ ಸ್ಪಷ್ಟತೆ, ಚಿತ್ರಗಳಿಗೆ ದೃಢತೆ, ಓದುಗರಿಗೆ ಪ್ರಸನ್ನತೆ.

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.

